Photo by Ambalal M. Patel



ಬಹುಮಾನ
ಪಡೆದ ಶೀರ್ಷಿಕೆ

ನೀರಿನೆಡೆಗೆ

ಕಳಿಸಿದವರು :
ಎಚ್. ಸಂಜೀವರಾವ್, ಸುರತಕಲ್ಲು

# ದೀಪಾವಳಿಯ ಆಕರ್ಷಣೆ



ಹೆಚ್ಚು ಪುಟಗಳು, ಸುಂದರ ರೇಖಾಚಿತ್ರ ಮತ್ತು ತ್ರಿವರ್ಣ ಚಿತ್ರಗಳು, ಕಥೆಗಳು ಇತ್ಯಾದಿ ಹೆಚ್ಚಿನ ಆಕರ್ಷಣೆಗಳೊಂದಿಗೆ

## ಹಿಂದಿ ಚಂದಮಾಮ

**ದೀಪಾವಳಿ (ನವಂಬರು) ಸಂಚಿಕೆ**

ಹೊರಬೀಳುತ್ತದೆ. ಇಷ್ಟೆಲ್ಲಾ ತುಂಬಿದ್ದರೂ ಸಂಚಿಕೆಯ ಬೆಲೆ ಮಾಮೂಲು 6 ಆಣೆಗಳೇ.

ಉಪೇಕ್ಷೆಯಿಂದಿದ್ದರೆ ಈ ಉತ್ತಮ ಸಂಚಿಕೆ ದೊರಕದೇ ಹೋಗಬಹುದು. ಆದುದರಿಂದ ನಿಮ್ಮ ಪ್ರತಿಗಾಗಿ ಈಗಲೇ ನಿಮ್ಮ ಊರಿನ ಏಜಂಟರಿಗೆ ಹೇಳಿ ಇರಿಸಿರಿ. ಇಲ್ಲವೇ ಇಂದೇ ಚಂದಾದಾರರಾಗಿರಿ. ಜಾಹೀರಾತುಗಳಿಗೆ ಈ ವಿಶೇಷಸಂಚಿಕೆ ಒಳ್ಳೆಯ ಸಂದರ್ಭವಾಗಿದೆ.



**ಚಂದಮಾಮಾ ಪಬ್ಲಿಕೇಷನ್ಸ್**

ವಡಪಳನಿ ಪೋಸ್ಟ್ :: ಮದರಾಸು - 26

# ಗ್ರೈಪ್ ಸಿರಪ್ - ಐ. ಟಿ. ಎಲ್.

ನಿಮ್ಮ ಮುದ್ದು ಕಂದನ ಅಜೀರ್ಣ ವ್ಯಾಧಿಗಳನ್ನು
ತಡೆದು ಆರೋಗ್ಯ ಕಾಪಾಡುವ ಅಮೃತಪಾನ.

ತಯಾರಕರು:

**ದಿ ಮೈಸೂರು ಇಂಡಸ್ಟ್ರಿಯಲ್ ಅಂಡ್
ಟೆಸ್ಟಿಂಗ್ ಲ್ಯಾಬೋರೆಟರಿ, ಲಿ.,**

ಮಲ್ಲೇಶ್ವರಂ - ಬೆಂಗಳೂರು - 3

ಎಲ್ಲಾ ಪ್ರಮುಖ ವ್ಯಾಪಾರಿಗಳಲ್ಲೂ
ದೊರೆಯುತ್ತದೆ



ವ್ಯಾಪಾರದ ಗುರುತು  **ಗ್ರೈಪ್ ಸಿರಪ್**

## ಬ್ರಹ್ಮಚರ್ಯವೇ ಜೀವನ

ಅರ್ಥಾತ್

ವೀರ್ಯನಾಶವೇ ಮೃತ್ಯು !

ವೀರ್ಯನಾಶದ ಕಾರಣ, ಲಕ್ಷಣಗಳನ್ನೂ ವೃಥ ಕಾಯರಾಗುವ ಗುಟ್ಟನ್ನೂ ತಿಳಿಸಿಕೊಡುವ ಅಮೂಲ್ಯವಾದ ಪುಸ್ತಕ! ಓದಿ ಧನ್ಯರಾಗಿರಿ!

ಬೆಲೆ: ೩-೦-೦ (ಅಂಚೆ ಸೇರಿ ೩-೮-೦)

ಉದರದ ಆರೋಗ್ಯ ಮತ್ತು
ಸ್ನಾಯುಬಲ ಸಂವರ್ಧನೆ!

ಹೊಟ್ಟೆಯ ವಿಕಾರಗಳನ್ನು ಗುಣಪಡಿಸುವ ಮತ್ತು ಆರೇ ತಿಂಗಳಲ್ಲಿ ಸ್ನಾಯುಬಲವನ್ನು ಗಳಿಸುವ ಅನೇಕ ಉಪಾಯಗಳೂ ನೂರಾರು ಯೋಗಾಸನಗಳೂ ಇದರಲ್ಲಿವೆ.

ಬೆಲೆ: ೨ ರೂ (ಅಂಚೆ ಸೇರಿ ೨-೬-೦)

ಇನ್ನೂ ಅನೇಕ ಪುಸ್ತಕಗಳಿವೆ. ಕ್ಯಾಟಲಾಗಿಗೆ ಎರಡಾಣೆ ಅಂಚೇಚೀಟಿ ಕಳಿಸಿರಿ.

ಸಮಾಜ ಪುಸ್ತಕಾಲಯ, ಧಾರವಾಡ




ರೌಂಡು, ಬಾದಾಮಿ, ಕಾಫಿ, ಚಂದ್ರಹಾರಗಳು, 24" ಒಂದೆಳೆಗೆ ರೂ. 11/- ಕರಿಮಣಿ ಚೈನು 18" 1ಕ್ಕೆ ರೂ. 5/-. 800 ಡಿಜೈನುಗಳ ಕ್ಯಾಟಲಾಗು ಉಚಿತ. ಪೋಸ್ಟೇಜು 1/-

ರಾಜಾ ಗೋಲ್ಡು ಕವರಿಂಗ್ ಕಂಪೆನಿ (ರಿಜಿ.)
ರಾಜಾ ಬಿಲ್ಡಿಂಗ್ಸ್; ಮಚಲೀಪಟ್ಟಣ.

ಚಂದಮಾಮ
ಮಕ್ಕಳ ಕತೆಯ ಮಾಸಪತ್ರಿಕೆ

ಸಂಪುಟ ೯]          ಅಕ್ಟೋಬರ್ ೧೯೫೭          [ಸಂಚಿಕೆ ೪

# ಗಾಂಧೀಜಿಯ ನೆನಪು

ದೇಶಪ್ರೇಮದ ಮಂತ್ರದಿ ನಮ್ಮನು
ಎಚ್ಚರಿಸಿದ ಗಾಂಧೀ!
ಸತ್ಯ ಅಹಿಂಸಾ ಬಲದಲಿ ಭಯವನು
ತೊಲಗಿಸಿದನು ಗಾಂಧೀ!

ಪರದೇಶಿಗಳನು ಓಡಿಸಿ ದೇಶವ
ಉದ್ಧರಿಸಿದ ಗಾಂಧೀ!
ಸ್ವತಂತ್ರ ಸೂರ್ಯನ ದೇಶದೊಳೆಲ್ಲಾ
ಬೆಳಗಿಸಿದನು ಗಾಂಧೀ!

ಸ್ವಾತಂತ್ರ್ಯೋತ್ಸವ ಸಮಯದಿ ನಮ್ಮನು
ನೋಡುತಲಿರುವನು ಗಾಂಧೀ!
ಆಕಾಶದಿ ಧ್ರುವತಾರೆಯ ರೂಪದಿ
ಬೆಳಗುತಲಿರುವನು ಗಾಂಧೀ!

—ಅಮ್ಮೆಂಬಳ ಅನಂತಯ್ಯ ನಾವಡ



# ಬೇಡನ ಸಾಹಸ







ಧೀರನಾದೊಬ್ಬ
ಬೇಡನಿದ್ದನು ಕಾರಡವಿಯ ಮಧ್ಯೆ.
ತಪ್ಪದವನ ಗುರಿ,
ಕರತಲಾಮಲಕ ಅವನಿಗೆ ಬಿಲ್ವಿದ್ಯೆ.

ಅನಾಥನಾಗಿಹ
ಬಾಲಕನೊಬ್ಬನು ಅವನ ಜತೆಯಲಿದ್ದ,
ನೆರಳಿನಂತೆಯಾ
ತರಳನು ಬೇಡನ ಬೆನ್ನನು ಬಿಡದಿದ್ದ.

ಬೇಡನ ಗುರಿಯನು
ನೋಡಿ ಮುಗ್ಧನಾಗುತ್ತಾ ಬಾಲಕನು
ಸಂಭ್ರಮದಿಂದ
ಕುಣಿದು 'ಕೇ' ಹಾಕಿ ಚಪ್ಪಾಳಿಕ್ಕುವನು.

ಕ್ರೂರಮೃಗಂಗಳ
ನೋಡಿ ಕೊಂಚವೂ ಬೆದರುವಾತನಲ್ಲ.
ಬೇಡನಂತೆಯೇ
ಧೀರ—ಶೂರನಾಗಿದ್ದ ಚಿಕ್ಕಮಲ್ಲ!

ಒಮ್ಮೆ ಈರ್ವರೂ
ಕಾಡಿನ ನಡುವೆ ಬೇಟೆಯಾಡುತಿರಲು,
ಒಂದೆಡೆಯಲ್ಲಿ
ಇದ್ದುವು ಭೀಕರ ದೆರಡು ಕರಡಿಗಳು.

ಇವರನು ಕಾಣುತೆ
ಆ ಕರಡಿಗಳೊಮ್ಮೆಗೇ ರೊಚ್ಚಿಗೆದ್ದು,
ಗರ್ಜನೆ ಗೆಯ್ದುವು,
ಅರಣ್ಯವೇ ನಡುಗಿತು ಪ್ರತಿದನಿಬಿದ್ದು!

ಒಂದು ಕರಡಿಯಾ
ಬೇಡನ ಮೇಲೆ ಹಾರಲು ಬರುತಿತ್ತು!
ಇನ್ನೊಂದು ಕರಡಿ
ಹುಡುಗನ ಹಾರಿ ಹಿಡಿಯಲು ಅಣಿಯಾಯ್ತು!

ಈ ಸಂಧಿಯಲಿ
ಬೇಡನ ಕೈಯಲಿ ಇದ್ದುದು ಅಂಬೊಂದೇ!
ಈ ವಿಪತ್ತಿಂದ
ಪಾರಾಗಲು ಮಿಂಚಿದ್ದು ಯುಕ್ತಿಯೊಂದೇ!

ಆ ಅಂಬಿಂದ
ಬಾಲನ ಕಡೆಗೇ ಬರುವಾ ಕರಡಿಯನು
ರೊಂಯ್ಯನೆ ಹೊಡೆದು,
ನಿಂತನು ಕದಲದೆ ಕಂಬದಂತೆ ತಾನು!

ಉಳಿದ ಕರಡಿಯದು
ಮುಂದೆ ಮುಂದೆ ಬರುತಿತ್ತು, ಬೇಡ ಕದಲಾ!
ರೆಪ್ಪೆಯಾಡಿಸದೆ
ನಿಂತವನ ಕಂಡು ಕರಡಿ ಗಚ್ಚರಿಯಲಾ!

ಬಳಿಗೆ ಬಂದರೂ
ಕದಲದ ಬೇಡನ ಕಂಡು ಕರಡಿ ನಿಂತು,
ಮತ್ತೇನೂ ಮಾಡದೆ,
ಹಿಂದೆ ತಿರುಗಿ ತನ್ನಷ್ಟಕೆತಾಹೋಯ್ತು!

ತನ್ನ ಹಾಗೆಯೇ
ನಿಂತಾ ತರಳನ ಕಂಡು ಬೇಡನೆಂದ:
"ಸಾಹಸವಿದ್ದರೆ—
ಕಠಿನ ವಿಪತ್ತನು ಗೆಲ್ಲಬಹುದುಕಂದ."







"ನವಗಿರಿನಂದ"



1



2



3



4



5



6



7



8



9

ಇಲ್ಲಿ ಒಂಭತ್ತು • ಚಿತ್ರಗಳಿವೆ. ಇವುಗಳಲ್ಲಿ ಪತ್ರಿಚಿತ್ರದಲ್ಲಿಯೂ ನಮ್ಮ ಚಿತ್ರಗಾರರು ಒಂದೊಂದು ತಪ್ಪು ಮಾಡಿದ್ದಾರೆ. ಆ ತಪ್ಪನ್ನು ನೀವು ಕಂಡುಹಿಡಿಯಬಲ್ಲಿರಾ? ಸರಿಯಾದ ಉತ್ತರಕ್ಕೆ ಬರುವತಿಂಗಳು "ಚಂದಮಾಮ" ನೋಡಿರಿ.




ಅಂಬಾಪುರದಲ್ಲಿ ಹೆಸರು ಹೋದ ದೇವಾಲಯವೊಂದಿತ್ತು. ಅದು ಪುರಾತನ ಕಾಲದ ದೇವಾಲಯ. ಈಗ ಬಹಳ ಕಡೆ ಶಿಥಿಲವಾಗಿ ಹೋಗಿತ್ತು.

ಆದರೂ ಅಲ್ಲಿ ಶಿಲ್ಪಕಳೆಗಳು ಅಚ್ಚಳಿಯದೆ ಹಾಗೇ ಇವೆಯೆಂದು ಜನರು ಹೇಳುತ್ತಿದ್ದರು. ಅದೇನೋ ನೋಡಿ ಬಿಡೋಣವೆಂದು ನಾನು ಒಮ್ಮೆ ಅಲ್ಲಿಗೆ ಹೊರಟೆನು.

ಹೋಗಿ ನೋಡಿದರೆ, ಏನು ಹೇಳಲಿ? ಗುಡಿಗೋಪುರಗಳು. ಸ್ತಂಭಗಳು, ಗುಮಟಗಳು, ಹೀಗೆ ಒಂದೇನು, ಎರಡೇನು?— ಎಲ್ಲಿ ನೋಡಿದರೂ ಅದ್ಭುತವಾದ ಶಿಲ್ಪಕಳೆಗಳಿಂದ, ನನ್ನನ್ನು ಆಶ್ಚರ್ಯದಲ್ಲಿಯೂ ಆನಂದದಲ್ಲಿಯೂ ಮುಳುಗಿಸಿ ಬಿಟ್ಟಿತು. ಎಲ್ಲಿ ನೋಡಿದರೂ ಕಲಾರಚನೆಗಳೇ!

ಎಲ್ಲಕ್ಕಿಂತಲೂ ನನ್ನನ್ನು ಹೆಚ್ಚಾಗಿ ಆಕರ್ಷಿಸಿದ್ದು ಒಂದೇ ಒಂದು ವಿಗ್ರಹ;— ಗುಡಿಯ ಮೂಲೆಯಲ್ಲಿದ್ದ ಒಂದೇ ಒಂದು ವಾಣೀದೇವಿಯ ವಿಗ್ರಹ. ಏನುಕಳೆ! ಏನು ಕಾಂತಿ!! ಏನು ಸೌಂದರ್ಯ!!! ಸ್ವರ್ಗದಲ್ಲಿ ನಿವಾಸ ಮಾಡುವ ವಾಣೀದೇವಿಯನ್ನು, ಸಾಕ್ಷಾತ್ತಾಗಿ ಭೂಲೋಕಕ್ಕಿಳಿಸಿದಂತೆ ಒಪ್ಪುತ್ತಿತ್ತು ಆ ವಿಗ್ರಹ. "ಇದನ್ನು ಕೆತ್ತಿದ ಆ ಮಹಾಶಿಲ್ಪಿಯಾರೊ! ದಿವ್ಯಮಂದಿರದ ಒಳಗಿಟ್ಟು ಪೂಜಿಸಬೇಕಾದಂತಹ ಈ ವಿಗ್ರಹವನ್ನು ಹೀಗೆ ಮೂಲೆಪಾಲು ಮಾಡಿದ್ದೇಕೋ!" ಎಂದು ನಾನು ಯೋಚಿಸುತ್ತಿದ್ದೆನು.

ಹೀಗೆ ಯೋಚಿಸುತ್ತಾ, ಆ ವಿಗ್ರಹದ ಮೇಲೆಯೇ ನೆಟ್ಟದೃಷ್ಟಿಯುಳ್ಳವನಾಗಿ ನಾನು ಎಷ್ಟು ಹೊತ್ತು ಇದ್ದೆನೋ ತಿಳಿಯದು. ಇದ್ದಕ್ಕಿದ್ದಂತೆ ಮನುಷ್ಯನ ಕೆಮ್ಮಿನ ಸದ್ದೊಂದು ಕೇಳಿಸಿತು. ಆ ಶಬ್ದವು ಬಂದ ಕಡೆಗೆ ಗಕ್ಕನೆ ತಿರುಗಿದೆ. ಯಾರೂ ಕಾಣಿಸಲಿಲ್ಲ. ನಾಲ್ಕು ಕಡೆಯೂ ಹುಡುಕಿ ನೋಡಿದೆ.

ಆಗ ಗುಡಿಯ ಹಿಂದಿನ ಬಾಗಿಲ ಬದಿಯಲ್ಲಿ ಒಬ್ಬ ಮುದುಕ ಗೋಚರಿಸಿದ. ಅವನ ದೇಹ ಬಹಳ ಬಡಕಲಾಗಿತ್ತು. ಕಣ್ಣು ಗುಂಡಿಯೊಳಗೆ ಬಿದ್ದಿತ್ತು. ಅವನು ತನ್ನ ಪ್ರಾಣವನ್ನೆ ಕಣ್ಣಿನಲ್ಲಿಟ್ಟುಕೊಂಡು ಆ ವಿಗ್ರಹವನ್ನೆ ನೋಡುತ್ತ ಹುಚ್ಚನಂತೆ ಕುಳಿತಿದ್ದ. ಈಗ

ಗೌರಿನಾಥ್ - ಮದ್ರಾಸು



ಕೆಮ್ಮಿದವನು ಇವನೇ ಆಗಿರಬೇಕೆಂದು ಕೊಂಡು, ಅವನ ಬಳಿಗೆಹೋದೆ. ವಿಚಾರಿಸಲಾಗಿ ಅವನು ಬಹಳ ಪ್ರಾಚೀನ ಕಾಲದವನೆಂದು ತಿಳಿಯಿತು.

ಅವನೊಡನೆ ನಾನು ಆ ಆಲಯವನ್ನು ಕುರಿತೂ ಆ ವಿಗ್ರಹವನ್ನು ಕುರಿತೂ ಕೇಳಿದೆ. ನನ್ನ ಪ್ರಶ್ನೆಗಳನ್ನು ಮೌನವಾಗಿ ಶ್ರದ್ಧೆಯಿಂದಲೇ ಅವನೂ ಕೇಳಿದನು. ಬಳಿಕ ಒಂದು ದೊಡ್ಡ ಶ್ವಾಸವನ್ನು ಬಿಟ್ಟು, ನಿಧಾನವಾಗಿ ಹೀಗೆಂದ :—

"ಅಪ್ಪಾ, ಇದನ್ನು ಕಟ್ಟಿಸಿದ ಮಹಾರಾಜನೊಬ್ಬ ಧರ್ಮಪ್ರಭು. ಪ್ರಜೆಗಳಿಗೆ ಹೆತ್ತ ತಂದೆಯಂತಿದ್ದ. ಆದ್ದರಿಂದ ರಾಜ್ಯದಲ್ಲಿ ಯಾವುದೊಂದು ಲೋಪವೂ ಇಲ್ಲದೆ ತುಂಬಾ ಸುಖ ಸುಭಿಕ್ಷವಾಗಿತ್ತು.

ರಾಜನಿಗೆ ಲಲಿತ ಕಲೆಗಳೆಂದರೆ ಪ್ರಾಣ. ಕವಿಗಳಿಗೂ ಶಿಲ್ಪಿಗಳಿಗೂ ಚಿತ್ರಕಾರರಿಗೂ ತುಂಬಾ ಮನ್ನಣೆ ಕೊಡುತ್ತಿದ್ದ. ಒಮ್ಮೆ ಅವನಿಗೆ, ಶಾಶ್ವತವಾಗಿ ಕೀರ್ತಿಬರುವಂತಹ ಒಂದು ದೊಡ್ಡ ಕೆಲಸ ಮಾಡಿಸ ಬೇಕೆಂದು ಬುದ್ಧಿ ಹುಟ್ಟಿತು—"

ಮುದುಕನು ಕಣ್ಣಿನಲ್ಲಿ ತುಂಬಿದ ನೀರನ್ನು ಒರೆಸಿಕೊಂಡು, ಮುಂದೆ ಹೇಳಿದನು.

"—ಮಹಾರಾಜನು ಸಾರಿದ ಡಂಗುರವನ್ನು ಕೇಳಿ ಎಲ್ಲಾ ಶಿಲ್ಪಿಗಳೂ ರಾಜಧಾನಿಯಲ್ಲಿ ಹಾಜರಾದರು. ಎಲ್ಲರೂ ತಮ್ಮ ತಮ್ಮ ಯೋಗ್ಯತೆಯನ್ನು ಕುರಿತು ಹೇಳಿದರು. ಆಗ 'ಪರಂಜ್ಯೋತಿ' ಎಂಬ ಶಿಲ್ಪಿ ಮುಂದೆ ಬಂದು 'ಪ್ರಭು, ಒಂದು ದೇವಾಲಯವನ್ನು ಕಟ್ಟುವಂತೆ ನನ್ನಗೆ ಅಪ್ಪಣೆಕೊಡಿರಿ. ಅದರಲ್ಲೊಂದು ಅದ್ಭುತವಾದ ವಿಗ್ರಹವನ್ನಿಟ್ಟು, ತಮ್ಮ ಕೀರ್ತಿ ದೇಶಾಂತರಗಳಲ್ಲೆಲ್ಲಾ ಪಸರಿಸುವಂತೆ ಮಾಡುವೆನು' ಎಂದನು.

'ಹಾಗೆಯೇ ಆಗಲೆಂ'ದು ರಾಜನು, ಅವನಿಗೆ ಬೇಕಾದುದನ್ನೆಲ್ಲಾ ಕೊಡುವಂತೆ ಮಂತ್ರಿಗೆ ಆಜ್ಞೆ ಕೊಟ್ಟನು. ಈ ಸಂಧಿಯನ್ನು ಸಾಧಿಸಿ, ಆ ಮಂತ್ರಿ ತನ್ನ ಹೆಂಡತಿಯದೊಂದು ವಿಗ್ರಹವನ್ನು ಮೊದಲು ಕೆತ್ತಿಕೊಡುವಂತೆ ಪರಂಜ್ಯೋತಿಯೊಡನೆ ಹೇಳಿದನು. 'ದೇವಕಾರ್ಯಕ್ಕೆ ತೊಡಗಿದ ನಾನು ಮಾನವ ವಿಗ್ರಹವನ್ನು ಕೆತ್ತಲಾರೆ' ಎಂದು ಖಂಡಿತವಾಗಿ ಹೇಳಿ ಪರಂಜ್ಯೋತಿ

ಮಂತ್ರಿಯ ಕೋರಿಕೆಯನ್ನು ನಿರಾಕರಿಸಿಬಿಟ್ಟ. ಇದರ ಪರಿಣಾಮ ಪಾಪ! - ಆಗ ಆ ಶಿಲ್ಪಿಗೆ ಗೊತ್ತಾಗಲಿಲ್ಲ !

ಬಿಕ್ಕಿಬಿಕ್ಕಿ ಅಳುತ್ತಾ ಮುದುಕನು ಮುಂದುವರಿಸಿದ:—"ಸಾವಿರಾರು ಜನರು ಕೆಲಸಮಾಡಿದರು. ಮೂರುವರ್ಷದಲ್ಲಿ ಈ ಮಹಾದೇವಾಲಯವು ಸಿದ್ಧವಾಯಿತು. ಮಹಾರಾಜನು ಚಿತ್ತಯಿಸಿ, ನೋಡಿ ಮೆಚ್ಚಿ ಆನಂದದಿಂದ ತುಂಬಿ ಹೋದನು. ಬಳಿಕ ಪರಂಜ್ಯೋತಿ ಸಿದ್ಧಗೊಳಿಸಿಟ್ಟಿದ್ದ ಈ ವಿಗ್ರಹದ ಬಳಿಗೆ ಬಂದನು"



"ಇದನ್ನು ನೋಡಿ ಅತ್ಯಾಶ್ಚರ್ಯಪಟ್ಟು 'ಅಹಾ! ಎಂತಹ ಅದ್ಭುತವಾದ ಶಿಲ್ಪ ನೈಪುಣ್ಯ! ಇದನ್ನು ದೇವಮಂದಿರದ ಪಕ್ಕದಲ್ಲಿಯೇ ಪ್ರತಿಷ್ಠಿಸಬೇಕು' ಎಂದನು ಮಹಾರಾಜ."

"ಆಗ ಬಳಿಯಲ್ಲಿದ್ದ ಮಂತ್ರಿ 'ಪ್ರಭುವೆ. ದೇವರ ಪಕ್ಕದಲ್ಲಿ ತಮ್ಮದೇ ಆದ ವಿಗ್ರಹವನ್ನು ಸ್ಥಾಪಿಸಬೇಕೆಂದು ಪ್ರತ್ಯೇಕಿಸಿ ಇಡಲ್ಪಟ್ಟಿದೆ. ಈ ವಿಗ್ರಹವನ್ನು ಬೇರೆ ಎಲ್ಲಿಯಾದರೂ ಸ್ಥಾಪಿಸಿ ಬಿಟ್ಟರೆ ಹೋಯಿತು' ಎಂದು ಯುಕ್ತಿಯಿಂದ ಹೇಳಿದನು"

"ಅದಕ್ಕೆ ರಾಜನು 'ಹಾಗಲ್ಲ ಮಂತ್ರಿ.' ಇದು ನಮ್ಮ ಶಿಲ್ಪಿ ತನ್ನ ಶಕ್ತಿಯನ್ನೆಲ್ಲಾ ಧಾರೆಯೆರೆದು ಕೆತ್ತಿದ ವಿಗ್ರಹ. ದೇಶದೇಶಾಂತರಗಳನ್ನೆಲ್ಲಾ ಆಕರ್ಷಿಸುವಷ್ಟು ಇದು ಅದ್ಭುತವಾಗಿದೆ. ಆದ್ದರಿಂದ ಇದನ್ನು ದೇವರ ಪಕ್ಕದಲ್ಲಿಯೇ ಇಡಬೇಕು' ಎಂದನು ಮತ್ತೂ ಆ ಮಹಾರಾಜ"

"ಕೂಡಲೇ ಮಂತ್ರಿ ಸಂಜ್ಞೆಮಾಡಿದನು. ರಾಜ್ಯದೊಳಗಿನ ಪ್ರಮುಖರೆಲ್ಲಾ ಬಂದು ಗುಂಪುಗೂಡಿದರು. ಅವರ ಅಭಿಪ್ರಾಯ ಕೇಳಲಾಗಿ—'ಪ್ರಭೂ! ದೇವರ ಬಳಿಯಲ್ಲಿ ನಮ್ಮ ಮಹಾರಾಜರ ವಿಗ್ರಹವೇ ಇರಬೇಕು' ಎಂದು ಎಲ್ಲರೂ ಏಕಕಂಠದಿಂದ ಹೇಳಿಬಿಟ್ಟರು. ಅಷ್ಟು ಜನರ ಮಾತನ್ನು ನಿರಾಕರಿಸಲಾರದೆ ರಾಜನು ಏನೂ ಹೇಳದೆ ಅಂತಃಪುರಕ್ಕೆ ಹೊರಟು ಹೋದನು."

"ಅನಂತರ ಮಂತ್ರಿ, ಪರಂಜ್ಯೋತಿ ಶಿಲ್ಪಿಯ ಬಳಿಗೆಬಂದು ವಿಷಮವಾಗಿ ನಗುತ್ತ 'ಏನಯ್ಯಾ ಶಿಲ್ಪಿ! ಮಾನವ ವಿಗ್ರಹವನ್ನು ಕೆತ್ತಲಾರೆನೆಂದು ಶಪಥ ಮಾಡಿದೆನೆಂದೆಯಲ್ಲವೆ?

ಈಗ ನಿನ್ನ ಈ ವಾಣೀ ವಿಗ್ರಹವನ್ನು ದೇವರ ಬಳಿಯಲ್ಲಿ ಸ್ಥಾಪಿಸಕೂಡದೆಂದು ಪ್ರಜೆಗಳೆಲ್ಲಾ ಹೇಳಿಬಿಟ್ಟರು. ಮಹಾರಾಜರೂ ಈ ವಿಗ್ರಹವನ್ನು ಇಲ್ಲಿಯೇ ಇಟ್ಟುಬಿಡುವಂತೆ ಆಜ್ಞಾಪಿಸಿದ್ದಾರೆ. ಈ ವಿಗ್ರಹಕ್ಕೆ ಬದಲು ಮಹಾರಾಜರ ವಿಗ್ರಹವನ್ನು ಕೆತ್ತಿರುತ್ತಿದ್ದರೆ ನಿನಗೆ ಯೋಗ್ಯಮನ್ನಣೆ ಸಿಗುತ್ತಿತ್ತು. ಈಗಲೂ ಮುಳುಗಿ ಹೋಗಿಲ್ಲ. ನನ್ನ ಹೆಂಡತಿಯ ವಿಗ್ರಹವೊಂದನ್ನು ಕೆತ್ತಿಕೊಡುವಿಯಾದರೆ, ನಿನ್ನ ಈ ವಿಗ್ರಹವೂ ನಿನ್ನ ಹೆಸರೂ ನೆಲೆನಿಲ್ಲುವಂತೆ ಮಾಡುತ್ತೇನೆ. ಚೆನ್ನಾಗಿ ಯೊಚನೆಮಾಡಿ ಹೇಳು' ಎಂದನು.

"ಇದನ್ನು ಕೇಳುತ್ತಲೇ ಶಿಲ್ಪಿ—'ಆಹಾ! ದುಷ್ಟನೆ, ನನ್ನ ಶಪಥವನ್ನು ಭಗ್ನಪಡಿಸಲಿಕ್ಕಾಗಿ ಈ ಬಗೆಯ ಸಿದ್ಧತೆ ಮಾಡಿದಿಯಾ? ಹಗೆ ತೀರಿಸಿಕೊಂಡಿಯಾ? ತೃಪ್ತಿಯಾಯಿತೆ ನಿನಗೆ?.... ಆದರೆ...." ಎನ್ನುತ್ತಾ ಶಿಲ್ಪಿ ಮೂರ್ಛೆಹೋಗಿ ಬಿದ್ದುಬಿಟ್ಟನು. ಬಳಿಕ ಕಣ್ಣುಬಿಡಿಸಿ "ನನ್ನ ವಾಣೀದೇವಿಗೆ ಪೂಜ್ಯತೆಯಿಲ್ಲದ ಮೇಲೆ ಈ ಗುಡಿ ಇದ್ದರೇನು? ಹೋದರೇನು? ಹೀಗೆ ಮಾಡಿದ ನೀನಾದರೂ ಏನು ಸುಖಕಾಣುವೆಯೋ— ಕಾಣು! ಕಾಣು!! ಕಾಣು!!!' ಎಂದು ಆರ್ತಾಲಾಪ ಮಾಡುತ್ತಾ ಆ ಮಹಾ ಶಿಲ್ಪಿ ಸತ್ತುಹೋದನು,"

ಈ ಕಡೇಮಾತುಗಳನ್ನು ಆ ಮುದಕನು ಬಹಳ ಕಷ್ಟದಿಂದ ಅಳುತ್ತಾ ಹೇಳಿದನು. "ಆ ದುಷ್ಟಮಂತ್ರಿಗೆ ಏನುದಂಡನೆಯೊ!" ಎಂದನು ಪುನಃ ಆ ಮುದುಕ.

ಇದನ್ನು ಕೇಳುತ್ತಾ ನಾನೂ ಉದ್ರಿಕ್ತನಾಗಿದ್ದೆ. "ದುಷ್ಟಮಂತ್ರಿ! ನಾನಿರುತ್ತಿದ್ದರೆ ಅವನನ್ನು ಅಲ್ಲಿಯೇ—" ಎನ್ನುತ್ತಾ ನಾನು, ನನ್ನ ಸೊಂಟದಲ್ಲಿ ಕುತ್ತಿಕೊಂಡಿದ್ದ ಚಿಕ್ಕ ಬಾಕುವನ್ನು ಎತ್ತಿ ಹಿಡಿದೆ. ಆಗ ಆ ಮುದುಕನ ಕಣ್ಣು ಮಿಂಚಿನಂತೆ ಹೊಳೆಯಿತು.

"ತನ್ನಿ ಹೀಗೆ" ಎನ್ನುತ್ತಾ ಆ ಮುದುಕ ತಟ್ಟನೆ ಮುಂದೆ ಬಂದು ನನ್ನ ಕೈಯಿಂದ ಆ ಬಾಕನ್ನು ಕಿತ್ತುಕೊಂಡು—" ಆ ದುಷ್ಟ ಮಂತ್ರಿ ನಾನೇ ಅಪ್ಪಾ! ಆ ಮಹಾಶಿಲ್ಪಿಯನ್ನು ಬಲಿಗೊಂಡ ಘಾತಕಮಂತ್ರಿ ನಾನೇ!!" ಎನ್ನುತ್ತಾ ಕೈಯಲ್ಲಿದ್ದ ಬಾಕುವನ್ನು ತನ್ನ ಎದೆಯೊಳಗೆ ಹೊಗಿಸಿಕೊಂಡು ನೆಲದಲ್ಲಿ ಬಿದ್ದನು!!!






## 9

[ರಾಜ್ಯವು ಶತ್ರುಗಳ ಕೈಸೇರಲಿಕ್ಕಿದೆ ಎಂಬವಾರ್ತೆ ತಿಳಿಯುತ್ತಲೇ ದೇವಸಿಂಹನನ್ನು ಹುಡುಕುವ ಭಾರವನ್ನು ಮಂತ್ರಿಗೇಬಿಟ್ಟು ರಾಜಧಾನಿಯನ್ನು ಸಂರಕ್ಷಿಸಿಕೊಳ್ಳಲಿಕ್ಕಾಗಿ ವೈದ್ಯನು ಅರಮನೆಗೆ ತಿರುಗಿದ್ದನ್ನೂ, ವಿಪರೀತ ಸ್ವಪ್ನಗಳನ್ನು ಕಂಡ ಶಕ್ತಿಸಿಂಹನು, ಕಡೆಗೆ ದೇವಸಿಂಹನಿರುವ ದೇವಾಲಯದೊಳಗೆ ಪ್ರವೇಶಿಸಿದ್ದನ್ನೂ ಓದಿದ್ದೀರಲ್ಲವೆ? ಆಮೇಲೆ—]

ಹುಡುಗನನ್ನು ಎತ್ತಿಕೊಂಡು ಶಕ್ತಿಸಿಂಹನು ಆಲಯದೊಳಗೆ ಹೊಕ್ಕಾಗ, ಹುಡುಗನು ಶಕ್ತಿಸಿಂಹನನ್ನು ನೇರಾಗಿ ಒಳಕ್ಕೆ ಕರೆದೊಯ್ಯಲಿಲ್ಲ. ಅಲ್ಲಿಯ ವಿಚಿತ್ರಗಳನ್ನೆಲ್ಲ ಒಂದೊಂದಾಗಿ ತೋರಿಸುತ್ತಾ "ಇಲ್ಲಿಗೆ ನನ್ನಂತಹ ಹುಡುಗರಲ್ಲದೆ ಮತ್ತೆಯಾರೂ ಬರಕೂಡದು. ನಮ್ಮ ಅಮ್ಮ ಬರುವುದರೊಳಗೆ ನಮ್ಮ ಬಂತಿ ನಮಗೆ ಕೊಟ್ಟು ಬೇಗನೇ ಹೊರಟುಹೋಗು" ಎಂದನು ಆ ಹುಡುಗ.

ಇದನ್ನು ಕೇಳಿ ಶಕ್ತಿಸಿಂಹನ ಆಶ್ಚರ್ಯ ಇನ್ನಷ್ಟು ಹೆಚ್ಚಿತು. ಏನಾದರೂ ಸರಿ, ಈ ದೇವಾಲಯದ ರಹಸ್ಯವೇನೋ, ಸ್ವಪ್ನದಲ್ಲಿ ಕಾಣಿಸಿದಂತೆ ದೇವಸಿಂಹನು ಇದರೊಳಗೆ ಇದ್ದಾನೋ ಇಲ್ಲವೋ, ಖಂಡಿತ ತಿಳಿದುಕೊಂಡೇ ಹೋಗುವುದೆಂದು ನಿಶ್ಚಯಮಾಡಿಕೊಂಡನು. ಈ ನಿಶ್ಚಯದಿಂದ, "ಪರವಾಯಿಲ್ಲ ಮಗು. ನಿಮ್ಮ ಅಮ್ಮನಿಗೆ ನಾನೇ ಸಮಾಧಾನ ಹೇಳುತ್ತೇನೆ" ಎಂದು ಹುಡುಗನನ್ನು ಲಾಲಿಸಿ ಎತ್ತಿಕೊಂಡೇ ಮುಂದಕ್ಕೆಸಾಗಿದನು.

ಅಷ್ಟರಲ್ಲಿ ಸಿಂಹಗಳೂ ಹುಲಿಗಳೂ ಗರ್ಜಿಸುವ ಶಬ್ದವು ಕೇಳಬಂದಿತು. ಅದೇನಾಗಿರಬಹುದೆಂದು ಯೋಚಿಸುತ್ತಿದ್ದಾಗ, ಆ ಹುಲಿ ಸಿಂಹಗಳು ಶಕ್ತಿಸಿಂಹನ ಕಡೆಗೆ ಧುಮುಕಲು ಓಡಿಬರುವುದು ಕಾಣಿಸಿತು.





"ಅದೆಲ್ಲಾ ನನಗೇನು ಗೊತ್ತು? ನಾವು ಆಡಿಕೊಂಡಿರಲಿಕ್ಕಾಗಿ, ಅಮ್ಮ ಅವುಗಳನ್ನು ಈ ಗುಡಿಯೊಳಗೆ ಇಟ್ಟುಹೋಗಿದ್ದಾಳೆ. ನಾವು ಇವುಗಳೊಂದಿಗೆ ತುಂಬಾ ಆಡುತ್ತೇವೆ. ನಮ್ಮ ಅಮ್ಮ ಇಲ್ಲಿಯೇ ಇರುವುದಿಲ್ಲ. ಎಲ್ಲಿಗೆ ಹೋಗುತ್ತಾಳೋ ನಮಗೆ ಗೊತ್ತಿಲ್ಲ. ಆಗಾಗಬಂದು ನಮ್ಮನ್ನು ನೋಡಿ ಹೋಗುತ್ತಾಳೆ" ಎಂದು ಆ ಹುಡುಗನು ಉತ್ತರ ಹೇಳಿದನು.

ಇಲ್ಲಿ ಇವರು ಹೀಗೆ ಮಾತಾಡುತ್ತಿದ್ದಾಗ ಬೆಟ್ಟದಬುಡದಲ್ಲಿ ಏನೋ ಸದ್ದು ಕೇಳಿತು. ಶಕ್ತಿಸಿಂಹನು ಕಣ್ಣುಬಿಟ್ಟು ನೋಡಿದನು. "ಮಂತ್ರಿಗಿಂತ್ರಿ ಬರುತ್ತಾನೇನೋ!" ಎಂದು ಸಂದೇಹಿಸಿದನು. "ಆದರೂ ಬಳಿಗೆಬಂದರೆ ತಿಳಿದುಹೋಗುತ್ತದೆ" ಎಂದುಕೊಂಡು ರೆಪ್ಪೆ ಮುಚ್ಚದೆ ನೋಡುತ್ತಿದ್ದನು.

ಸ್ವಲ್ಪಹೊತ್ತಿಗೆಲ್ಲಾ ಆ ಬರುತ್ತಿರುವ ವ್ಯಕ್ತಿ ಬೆಟ್ಟದ ನಡುವಿನವರೆಗೆ ಏರಿಕೊಂಡು ಬಂದನು. ಶಕ್ತಿಸಿಂಹನು ಎದ್ದು ನಾಲ್ಕು ಹೆಜ್ಜೆ ಮುಂದೆ ಹಾಕಿ ಚೆನ್ನಾಗಿ ಪರೀಕ್ಷೆಮಾಡಿ ನೋಡಿದನು. ಹೌದು. ಆ ಬರುವವನು ಮಂತ್ರಿಯೇ ಹೌದೆಂದು ಖಂಡಿತವಾಯಿತು. ತಾನು ಮಂತ್ರಿಯ ಕಣ್ಣಿಗೆ ಬೀಳದಂತೆಯೇ ಮುಂದೆ ಜರುಗುವುದನ್ನು ನೋಡಬೇಕೆಂದು, ಶಕ್ತಿಸಿಂಹನು ಒಂದು ದೊಡ್ಡ ಬಂಡೆಯಹಿಂದೆ ಅಡಗಿ ಕುಳಿತುಕೊಂಡನು. ಹುಡುಗ ಅವನ ಜತೆಯಲ್ಲಿಯೇ ಇದ್ದ.

ಶಕ್ತಿಸಿಂಹನು ಹಿಂದಿರುಗಿ ನೋಡದೆಯೇ ಓಡುತ್ತಾ ಆಲಯದ ಹೊರಗಡೆಗೆ ಬಂದು ಸೇರಿದನು. ಕುಂಕುಳಲ್ಲಿದ್ದ ಹುಡುಗ ಕಂಕುಳಲ್ಲಿಯೇ ಇದ್ದ. ಆಗಲೂ ಧೈರ್ಯವು ಸಾಲಲಿಲ್ಲ. ಅಲ್ಲಿಯೇ ಇದ್ದರೆ ಇನ್ನೇನು ಅಪಾಯವೋ ಎಂದಂಜಿ, ಬೆಟ್ಟವನ್ನೆ ಇಳಿದು ಹೋಗಲಿಕ್ಕೆ ನೋಡಿದನು. ಇಷ್ಟರಲ್ಲಿ ದೇವಾಲಯದ ಬಾಗಿಲು ಮುಚ್ಚಿಕೊಂಡುಬಿಟ್ಟಿವು. ಆಗ ಶಕ್ತಿಸಿಂಹನಿಗೆ ಕೊಂಚ ಧೈರ್ಯ ಬಂತು.

ಸ್ವಲ್ಪಸ್ಥಿತಿಮಿತಕ್ಕೆ ಬಂದಮೇಲೆ ಶಕ್ತಿಸಿಂಹನು ಬಾಲಕನನ್ನು ನೋಡಿ—"ಎಂತಹ ದೇವಾಲಯವಿದು? ಕ್ರೂರಮೃಗಗಳು ಇಲ್ಲೇಕೆ? ಅದಲ್ಲದೆ ನಿಮ್ಮ ತಾಯಿ ಎಲ್ಲಿದ್ದಾಳೆ? ನೀನೂ ನಿನ್ನ ಗೆಳೆಯನೂ ಇವುಗಳ ನಡುವಿನಲ್ಲಿ ಹೇಗಿರುತ್ತೀರಿ?' ಎಂದು ಕೇಳಿದನು.



ಸ್ವಲ್ಪಹೊತ್ತಿಗೆ ಆ ಬಂಡೆಯ ಬದಿಯಲ್ಲಿ ಯಾರೋ ನಡೆದುಹೋಗುವ ಶಬ್ದವಾಯಿತು. ಈಸಾರಿ ಶಕ್ತಿಸಿಂಹನು ಸ್ಪಷ್ಟವಾಗಿ ನೋಡಿದನು; ಸಾಕ್ಷಾತ್ ಮಂತ್ರಿಯೇ! ಬೇಗಬೇಗನೆ ನಡೆಯುತ್ತಾ ಗುಡಿಯ ಕಡೆಗೆ ಹೋಗುತ್ತಿದ್ದಾನೆ.

"ಇದೆಂತಹ ವಿಧಿಯ ವಿಪರೀತ! ಇಬ್ಬರೂ ಒಂದೇ ಕಡೆಯಲ್ಲಿ ಹೇಗೆ ಸೇರಿಕೊಂಡುಬಿಟ್ಟೆವು! ಆದರೂ ಆಲಯದ ಬಾಗಿಲು ಮುಚ್ಚಿಕೊಂಡಿವೆಯಷ್ಟೆ? ಅವನು ಒಳಕ್ಕೆ ಹೇಗೆ ಪ್ರವೇಶಿಸಿಯಾನು?" ಎಂದು ಶಕ್ತಿಸಿಂಹನು ತರ್ಕಿಸಿಕೊಳ್ಳುತ್ತಿರುವಾಗ, ಆಲಯದ ಬಾಗಿಲು ತೆರೆದುಕೊಂಡ ಶಬ್ದ ಕೇಳಿತು. ಒಡನೆಯೇ ಮಂತ್ರಿ ಅದರೊಳಗೆ ಹೊಕ್ಕುಬಿಟ್ಟ; ಬಾಗಿಲು ಕೂಡಲೇ ಮುಚ್ಚಿಕೊಂಡೂಬಿಟ್ಟಿತು.

"ಒಳಗೆ ಹೇಗೋ ಹೊಕ್ಕುಬಿಟ್ಟರೇನು? ಆ ಹುಲಿಸಿಂಹಗಳು ಅವನನ್ನು ಬದುಕಲು ಬಿಟ್ಟಾವೆ? ಇನ್ನೊಂದು ಕ್ಷಣದಲ್ಲಿ ಹೊರಗೆ ಓಡಿಬರಬೇಕಾದ್ದೇ" ಎಂದುಕೊಳ್ಳುತ್ತಾ ಶಕ್ತಿಸಿಂಹನು ಆ ಬಾಲಕನೊಂದಿಗೆ ಹರಟೆ ಹೊಡೆಯುತ್ತ, ಮಂತ್ರಿ ಮರಳಿಬರುವುದನ್ನೆ ಕಾದಿದ್ದನು.

ಅಲ್ಲಿ ಒಳಗೆಹೋದ ಮಂತ್ರಿ, ಆಲಯದೊಳಗಿನ ವಿಚಿತ್ರಗಳನ್ನೆಲ್ಲ ನೋಡುತ್ತ, ಹುಲಿಯೂ ಸಿಂಹಗಳೂ ವಿಹರಿಸುವಲ್ಲಿಗೆ ಸೇರಿದನು. ಅವುಗಳನ್ನು ನೋಡುತ್ತಲೇ ಅವನಿಗೆ ನಡುಕವುಂಟಾಯಿತು. ಆದರೆ ಆ ಮೃಗಗಳು ಅವನ ಗೊಡವೆಗೇ ಬಾರದೆ ಅವುಗಳಷ್ಟಕ್ಕೆ ಅವು ತಿರುಗುತ್ತಿರುವುದನ್ನು ನೋಡಿದ ಮೇಲೆ ಆಶ್ಚರ್ಯವಾಯಿತು. ಸಂಪೂರ್ಣ ಧೈರ್ಯ ವುಂಟಾಯಿತು.



ಹಾಗೆಯೇ ಹೋಗಿಹೋಗಿ ದೇವಸಿಂಹನಿರುವ ಸ್ಥಳವನ್ನು ಸೇರಿದನು. ದೇವಸಿಂಹನು ಗಾಢನಿದ್ರೆಯಲ್ಲಿ ಮುಳುಗಿಹೋಗಿದ್ದ. ಮಂತ್ರಿ ಆ ಬಾಲಕನ ಹತ್ತಿರವೇ ಕುಳಿತುಕೊಂಡು, ಅವನ ಮುಖವನ್ನು ಪರೀಕ್ಷೆಮಾಡಿ ನೋಡಿದನು.

ಗಲ್ಲದಮೇಲೆ ಕಣ್ಣೀರಿನ ಧಾರೆ ಕಾಣುತ್ತಿತ್ತು. ಕಣ್ಣುರೆಪ್ಪೆಗಳು ಕೊಂಚ ಉಬ್ಬಿಕೊಂಡಿದ್ದುವು. ಬಿಕ್ಕಿಬಿಕ್ಕಿ ಅತ್ತು ಅತ್ತು ಬಳಲಿ ಹಾಗೇ ನಿದ್ರೆಮಾಡುತ್ತಿದ್ದಾನೆಂದು



ಗ್ರಹಿಸಿದನು. ಈಗ ಎಚ್ಚರಿಸಬಾರದು ಎಂದುಕೊಂಡು, ಇನ್ನೂ ಕೊಂಚ ಮುಂದಕ್ಕೆ ಸಾಗಿದನು.

ಸ್ವಲ್ಪಮುಂದೆ ಹೋಗುವಷ್ಟರಲ್ಲಿ ದೇವಾಲಯದ ಸುತ್ತಿನ ಗೋಡೆಗಳು ಅಡ್ಡಬಂದುವು. ದಾಟಿಹೋಗಲು ದಾರಿ ಇಲ್ಲ. ತಿರುಗಿ ದೇವಸಿಂಹನ ಬಳಿಗೇ ಬಂದನು. ಆಗ ದೇವಸಿಂಹನು ನಿದ್ರೆಯಿಂದ ಎದ್ದು ಏನೋ ತೀವ್ರವಾದ ಆಲೋಚನೆಯಲ್ಲಿ ಮುಳುಗಿಹೋಗಿದ್ದ. ಯಾರೋ ಬರುವ ಶಬ್ದವು ಕೇಳಿದುದರಿಂದ ಅತ್ತ ತಿರುಗಿ ನೋಡಿದನು. ಹಿಂದೆ ಅಪೂರ್ವ ಭವನದಲ್ಲಿ ಈ ಮಂತ್ರಿಯನ್ನು ನೋಡಿದ ಗುರುತು ಇದ್ದುದರಿಂದ, ಅವನೇ ಇವನೆಂದು ದೇವಸಿಂಹನಿಗೆ ಗೊತ್ತಾಯಿತು. "ಇಲ್ಲಿಗೆ ನೀವು ಹೇಗೆ ಬಂದಿರಿ? ನನ್ನ ಗೆಳೆಯ ಎಲ್ಲಿಗೆ ಹೋದ?" ಎಂದು ದೇವಸಿಂಹನು ಆತುರದಿಂದ ಕೇಳಿದನು.

ಅದಕ್ಕೆ ಮಂತ್ರಿ—"ಹೇಗೆ ಬಂದೆನೋ ಏನೋ ನನಗೇ ಗೊತ್ತಿಲ್ಲ. ಅದೆಲ್ಲ ಇರಲಿ. ಗೆಳೆಯ ಎಂದು ಹೇಳಿದಿಯಲ್ಲ, ಯಾರು ಆ ಗೆಳೆಯ?" ಎಂದು ಕೇಳಿದನು.

"ನನ್ನ ಜತೆಗೆ ಆಡಿಕೊಳ್ಳಲಿಕ್ಕೆ ನನ್ನಮ್ಮ ಒಬ್ಬ ಹುಡುಗನನ್ನು ಇಲ್ಲಿ ಬಿಟ್ಟುಹೋಗಿದ್ದಾಳಲ್ಲವೆ? ನಾವು ಬಂತಿಯಾಟ ಆಡುತ್ತಿರುವಾಗ ಬಂತಿ ಹೊರಗೆ ಬಿದ್ದುಹೋಯಿತು. ಅದನ್ನು ಹುಡುಕಿ ತರುವೆನೆಂದು ನನ್ನ ಗೆಳೆಯ ಹೋದ. ಎರಡುದಿನವಾಯಿತು. ಇನ್ನೂ ತಿರುಗಿ ಬರಲಿಲ. ಎಲಿಗೆ ಹೋದನೋ ಏನೋ!" ಎಂದನು ದೇವಸಿಂಹನು ತುಂಬಾ ವಿಚಾರದಿಂದ.

"ಹಾಗೋ? ಪಾಪ! ನಾನು ಹುಡುಕುತ್ತೇನೆ. ಹೋಗೋಣ" ಎಂದು ಮಂತ್ರಿ ದೇವಸಿಂಹನನ್ನು ಎತ್ತಿಕೊಂಡು ಆಲಯದ ಹೊರಗಡೆಗೆ ಬಂದನು.

ಆಗ ಅಲ್ಲಿ ಶಕ್ತಿಸಿಂಹನು ಇನ್ನೂ ಆ ಹುಡುಗನೊಂದಿಗೆ ಮಾತನಾಡುತ್ತಾ ಇದ್ದ. ಮಂತ್ರಿ ಬಂದುದನ್ನು ಆತನು ನೋಡಲೇ ಇಲ್ಲ. ಆದರೆ ಮಂತ್ರಿ ಮಾತ್ರ ಅವನನ್ನು ನೋಡಿದ.

ನೋಡುತ್ತಲೇ ಮಂತ್ರಿ ವಿಚಾರದಲ್ಲಿ ಬಿದ್ದನು: "ಇಷ್ಟುದೂರ ಬಂದಮೇಲೆ ಇನ್ನೂ ತಪ್ಪಿಸಿಕೊಂಡು ತಿರುಗುವುದೇಕೆ? ಅವನ

ಎದುರಿಗೆ ಹೋಗಿ, ಹಾಗೋ ಹೀಗೋ ನಿರ್ಣಯಿಸಿಯೇ ಬಿಡುವುದು ಒಳ್ಳೆಯದು. ಆದರೆ ದುಡುಕ ಬಾರದು. ನಾನಾಗಿ ಈಗಲೇ ಇವನ ಕಣ್ಣಿಗೆ ಏಕೆ ಬೀಳಬೇಕು?" ಹೀಗೆ ಯೋಚಿಸಿ ಮಂತ್ರಿ ದೇವಸಿಂಹನೊಂದಿಗೆ ಅಲ್ಲಿಂದ ಹೊರಟುಹೋದನು.

ಸ್ವಲ್ಪಹೊತ್ತಿನಲ್ಲಿ ಶಕ್ತಿಸಿಂಹನಿಗೆ ತಾನು ಬಂದ ಕೆಲಸದ ನೆನಪು ಬಂತು: "ಒಳಗೆ ಹೋದ ಮಂತ್ರಿ ಏನಾದ? ಒಳಗಿರುವ ಮೃಗಗಳಿಗೆ ಸಿಕ್ಕದೆ ಅವನು ಹೇಗೆ ತಿರುಗುತ್ತಿದ್ದಾನು?" ಎಂದು ತನಗೆತಾನೇ ಕೇಳಿಕೊಂಡನು. ಒಂದೂ ಗೊತ್ತಾಗದೆ, ಮಂತ್ರಿ ಯಾವಾಗ ಹೊರಗೆ ಬರುತ್ತಾನೋ ಎಂದು ನಿರೀಕ್ಷಿಸುತ್ತ ಶಕ್ತಿ ಸಿಂಹನು ಅಲ್ಲಿಯೇ ಇದ್ದನು.

* * *

ಅಲ್ಲಿ ರಾಜಧಾನಿಯಲ್ಲಿ, ವೈದ್ಯನು ಭಟರೊಂದಿಗೆ ಹೋಗಿ ಸೇರಿದಾಗ ಪರಿವಾರದ ಸ್ಥಿತಿ ಬಹಳ ಕಷ್ಟವಾಗಿತ್ತು. ಶತ್ರುಸೇನೆ ಸಾವಿರ ಸಂಖ್ಯೆಯಾಗಿ ಮುತ್ತಿದ್ದರು. ಅವರಿಗೆ ಶರಣಾಗತಿಯಾಗುವುದಲ್ಲದೆ ವೈದ್ಯನಿಗೆ ಬೇರೆ ಉಪಾಯವೇ ತೋರಲಿಲ್ಲ.

ತನ್ನ ಭಟರೊಂದಿಗೆ ವೈದ್ಯನು ಶತ್ರುರಾಜನ ಬಳಿಗೆ ಹೊರಟನು. ತೀರಾ ಅವನ ಸಮೀಪಕ್ಕೆ ಹೋಗುವುದರೊಳಗೆ ಒಂದು ವಿಚಿತ್ರವು ಜರುಗಿತು. ಇದ್ದಕಿದ್ದಹಾಗೆ ಮಹಾಸುಳಿಗಾಳಿ ಪ್ರಾರಂಭವಾಯಿತು. ಶತ್ರುಸೈನ್ಯವು ಒಣಗಿದ ತರಗೆಲೆಗಳಂತೆ ಚಲ್ಲಾಪಿಲ್ಲಿಯಾಗ ತೊಡಗಿತು.



ನೋಡುತ್ತಿದ್ದಂತೆ ಅವರು ಮುತ್ತಿಗೆಹಾಕಿದ ಕೋಟೆ ಅದೃಶ್ಯವಾಗಿ ಹೋಯಿತು. ಆ ಕೂಡಲೇ ಸುಳಿಗಾಳಿ ನಿಂತುಹೋಯಿತು.

ಶತ್ರುರಾಜನು ಬೆರಗಾಗಿ—"ಇದೇನು ವಿಚಿತ್ರ! ಕೋಟೆ ಎಲ್ಲಿಗೆ ಹೋಯಿತು? ಈಗೇನು ಮಾಡೋಣ?" ಎಂದು ಸೇನಾಧಿಪತಿಯೊಡನೆ ಕೇಳಿದನು. ಸೇನಾಧಿಪತಿ ಏನು ಹೇಳಬೇಕು?

"ಈಗೇನು ಮಾಡಬೇಕೋ ತಿಳಿಯುವುದಿಲ್ಲ ಮಹಾರಾಜಾ. ಹಿಂದಿರುಗಿ ಹೋಗುವುದೇ ಉತ್ತಮ" ಎಂದು ಸಲಹೆಹೇಳಿದನು ಸೇನಾಧಿಪತಿ.

ಅದಕ್ಕಿಂತ ಬೇರೆ ಆಲೋಚನೆ ರಾಜನಿಗೂ ತೋರಲಿಲ್ಲ. ಅವನು ಒಡನೆಯೇ ಸೈನ್ಯದೊಂದಿಗೆ ಹೊರಟುಬಿಟ್ಟನು.



ಶತ್ರುಸೈನ್ಯವು ರಾಜಧಾನಿಯ ಗಡಿಯನ್ನು ದಾಟುವ ವರೆಗೂ ವೈದ್ಯನು ಪ್ರಾಣವನ್ನು ಕೈಯಲ್ಲಿ ಹಿಡಿದುಕೊಂಡು ನಿಂತಿದ್ದನು. ತರು ವಾಯ ಧೈರ್ಯದಿಂದ ರಾಜಧಾನಿಯನ್ನು ಪ್ರವೇಶಿಸಿದನು. ನೋಡಿದರೆ ಕೋಟೆಮಾತ್ರ ವಲ್ಲ, ಮನೆಗಳು ಕೂಡಾ ಮಾಯವಾಗಿ ಹೋಗಿದ್ದುವು. ಜನರು ಗುಂಪುಗುಂಪಾಗಿ ಸೇರಿಕೊಂಡು ಗುಸಗುಸನೆ ಮಾತಾಡು ತ್ತಿದ್ದರು.

ವೈದ್ಯನನ್ನು ಕಾಣುತ್ತಲೇ ಎಲ್ಲರೂ ಬಂದು ಅವನ ಸುತ್ತುಮುತ್ತೂ ನೆರೆದರು. "ಯಾವಾಗ ಬಂದಿರಿ ನೀವು? ಮಹಾರಾಜರು ಏನಾದರು? ಈಗ ಜರುಗಿದ ಆಶ್ಚರ್ಯವನ್ನು ನೋಡಿದಿ ರಲ್ಲವೆ? ಈ ಮಾಯೆ ಏನೆಂದು ಗೊತ್ತಾ ಯಿತೆ? ಯಾರಿಗೂ ನಿಲ್ಲಲಿಕ್ಕೆ ನೆರಳಿಲ್ಲದೆ ಹೋಯಿತಲ್ಲ? ಇನ್ನೇನು ಗತಿ?" ಎಂದು ಪ್ರಶ್ನೆಗಳಮಳೆಯನ್ನೆ ಸುರಿಸಿದರು.

ಅದಕ್ಕೆ ವೈದ್ಯನು—"ಮಹಾರಾಜರ ಸಂಗತಿ ನನಗೂ ಗೊತ್ತಿಲ್ಲ. ಶತ್ರುಗಳು ನಮ್ಮ ರಾಜ್ಯಕ್ಕೆ ಮುತ್ತಿಗೆಹಾಕಿರುವುದನ್ನು ತಿಳಿದು ನಾನು ಬಂದೆ. ಅಷ್ಟರಲ್ಲಿ ಹೀಗಾಗಿ ಹೋಯಿತು. ಆದರೆ ನೀವೇನೂ ಅಧೈರ್ಯ ಪಡಬೇಡಿ. ಈ ಮಾಯವೆಲ್ಲಾ ಬೇಗನೇ ಬಯಲಾದೀತು. ಅಷ್ಟರವರೆಗೆ...." ಎಂದು ಹೇಳುತ್ತಿರುವಾಗಲೇ ಪುನಃ ಸುಳಿಗಾಳಿ ಪ್ರಾರಂಭವಾಯಿತು.

ಎಲ್ಲಿದ್ದವರಲ್ಲಲ್ಲೇ ಪ್ರಾಣವನ್ನು ಬಿಗಿಹಿಡಿದು ಕೊಂಡು ನಿಂತುಬಿಟ್ಟರು. ಅಷ್ಟರಲ್ಲಿ ಸುಳಿಗಾಳಿ ನಿಂತಿತು. ಕೋಟೆಗಳೂ ಭವನಗಳೂ ಮೊದ ಲಿದ್ದ ಸ್ಥಲದಲ್ಲಿಯೇ ಕಂಡುಬಂದುವು. ಆದರೆ ಈಬಾರಿ ಇನ್ನೊಂದು ವಿಚಿತ್ರವೂ ಜರುಗಿತು.

ವೈದ್ಯನ ತಲೆಯ ಮೇಲುಭಾಗದಲ್ಲಿ ಒಂದು ವಿಶೇಷ ಶಬ್ದವು ಕೇಳಿತು. ಏನೆಂದು ತಲೆಯೆತ್ತಿ ನೋಡಿದಾಗ, ಇಷ್ಟುಕಾಲದಿಂದ ಅವರೆಲ್ಲಾ ಎದುರು ನೋಡುತ್ತಿದ್ದ ಆ ವೃದ್ಧೆ ಕಣ್ಣಿಗೆ ಬಿದ್ದಳು!

ವೈದ್ಯನಿಗೆ ಧೈರ್ಯಬಂತು. ಈಬಾರಿ ಆ ವೃದ್ಧೆಯೊಡನೆ ಹೇಗಾದರೂ ಮಾತಾಡ ಬೇಕೆಂದು ಕೈಸನ್ನೆಯಿಂದ ಇಳಿದು ಬರುವಂತೆ ಸೂಚನೆ ಮಾಡಿದನು.

ವೃದ್ಧೆ ಇಳಿಯತೊಡಗಿದಳು. ಹತ್ತಿರ ಹತ್ತಿರ ಬರುತ್ತಿದ್ದಾಗ ಅವಳು ಒಂದು

ದೊಡ್ಡ ಪಕ್ಷಿಯಾಗಿ ಬದಲಾಯಿಸಿ. ವೈದ್ಯನನ್ನು ಕಾಲುಗಳಿಂದ ಹಿಡಿದುಕೊಂಡು ರಿವ್ವನೆ ಆಕಾಶದಲ್ಲಿ ಹಾರಿದಳು.

ವೀರರೆಲ್ಲಾ ನಿಸ್ತಬ್ಧರಾಗಿ ಹೋದರು. ಆ ಹಕ್ಕಿ ಹಾರಿದಕಡೆಗೆ ರೆಪ್ಪೆಮುಚ್ಚದೆ ನೋಡಿದರು. ಅದು ಕಣ್ಣಿಗೆ ಕಾಣಿಸದಂತೆ ಎಲ್ಲಿಗೋ ಮಾಯವಾಗಿಹೋಯಿತು.

ಹೋಗಿ ಹೋಗಿ ಆ ಪಕ್ಷಿ ಬೆಟ್ಟದ ತುದಿಯ ದೇವಾಲಯದ ಬಳಿಯಲ್ಲಿ ನಿಂತಿತು. ನಿಂತಾಗ ಪಕ್ಷಿಹೋಗಿ ವೃದ್ಧೆಯಾಗಿದ್ದಳು.

ಇನ್ನೂ ಶಕ್ತಿಸಿಂಹನು ಅಲ್ಲಿಯೇ ಇದ್ದನು. ಪಕ್ಷಿಯ ಶಬ್ದವನ್ನು ಕೇಳಿ ತಿರುಗಿ ನೋಡಿದನು. ಪಕ್ಷಿಯೆಲ್ಲಿದೆ? ವೈದ್ಯನೂ ವೃದ್ಧೆಯೂ ತನ್ನ ಬಳಿಗೇ ಬರುವುದನ್ನು ನೋಡಿದನು.

ಶಕ್ತಿಸಿಂಹನೂ ಅವರಿಗಿದಿರಾಗಿ ನಡೆದು ಬಂದನು. ಅವನನ್ನು ನೋಡಿ ವೈದ್ಯನಿಗೆ ಆಶ್ಚರ್ಯವಾಯಿತು. ಅವನಬಳಿಯಲ್ಲಿರುವ ಆ ಹುಡುಗನು ದೇವಸಿಂಹನೇನೋ ಎಂದು ಭ್ರಮಿಸಿದನು. ಮತ್ತೆ ಚೆನ್ನಾಗಿ ನೋಡಿದಾಗ ಅಲ್ಲವೆಂದು ಗೊತ್ತಾಯಿತು.

ದೇವಾಲಯದೊಳಗೆ ಬಿಟ್ಟಿದ್ದ ಈ ಹುಡುಗ ಹೊರಗೆ ಹೇಗೆಬಂದ? ಬಂದುದು ಮಾತ್ರವಲ್ಲ, ಬಹಳ ದುಷ್ಟನಾದ ಶಕ್ತಿಸಿಂಹನೊಂದಿಗೆ ಹೇಗೆ ಸೇರಿದ? ಇದರಿಂದ ವೃದ್ಧೆಯೂ ಆಶ್ಚರ್ಯಪಡುತ್ತಿದ್ದಳು. ಹಾಗಾದರೆ ದೇವಸಿಂಹನೇನಾದ? ಇದೆಲ್ಲಾ ವೃದ್ಧೆಯ ಮನಸ್ಸನ್ನು ಗಲಿಬಿಲಿಗೊಳಿಸಿತು.




ಅವಳು ಹುಡುಗನ ಕಡೆಗೆ ಕೈಚಾಚಿದಳು. ಶಕ್ತಿಸಿಂಹನು ಅನುಮಾನಿಸುತ್ತಾ ಹುಡುಗನನ್ನು ಕೆಳಗೆಬಿಟ್ಟನು. ವೃದ್ಧೆ ಹುಡುಗನನ್ನು ಕಂಕುಳಲ್ಲೆತ್ತಿಕೊಂಡು ಚರಚರನೆ ಆಲಯದ ಕಡೆಗೆ ಹೋದಳು. ಅವಳನ್ನು ನೋಡುತ್ತಾ ವೈದ್ಯನೂ ಶಕ್ತಿಸಿಂಹನೂ ನಿಂತಲ್ಲೇ ನಿಂತುಬಿಟ್ಟರು. ನೋಡುತ್ತಿದ್ದಂತೆ ದೇವಾಲಯದ ಬಾಗಿಲು ತೆರೆದುಕೊಂಡಿತು. ವೃದ್ಧೆ ಒಳಗೆ ಹೋಗುತ್ತಲೇ ಬಾಗಿಲು ಮುಚ್ಚಿತು.

ತರುವಾಯ ಶಕ್ತಿಸಿಂಹನೂ ವೈದ್ಯನೂ ಕುಳಿತುಕೊಂಡು ಸಾವಕಾಶವಾಗಿ ಮಾತಾಡತೊಡಗಿದರು. ತಾನು ಮಂತ್ರಿಯನ್ನು ಸಂಧಿಸಿದಮೇಲೆ ಅದುವರೆಗೆ ಜರುಗಿದ್ದೆಲ್ಲವನ್ನೂ ವೈದ್ಯನು ಹೂಸರಿದಹಾಗೆ ಹೇಳಿದನು. ಎಲ್ಲಾ ಕೇಳುತ್ತಿದ್ದಂತೆ ಶಕ್ತಿಸಿಂಹನ ಆಲೋ

ಜನೆ ಪರಿಪರಿವಿಧವಾಗಿ ಹೋಗುತ್ತಿತ್ತು. "ದೇವಸಿಂಹನು ಬದುಕಿಯೇ ಇದ್ದಾನೆಯೆ? ರಾಜ್ಯವು ಶತ್ರುಗಳ ಕೈಗೆ ಸಿಕ್ಕಿ ಕೂಡಾ ತಿರುಗಿ ದಕ್ಕಿತೆ? ಆ ಮಂತ್ರಿಯೂ ದೇವಸಿಂಹನೂ ಏನಾದರೋ ತಿಳಿಯಲಿಲ್ಲವಲ್ಲ?—" ಎಂದು ಯೋಚಿಸುತ್ತಾ ಆಶ್ಚರ್ಯಪಡುತ್ತಾ ನಿಂತಿದ್ದನು ಶಕ್ತಿಸಿಂಹ.

ಕಡೆಗೆ ಅವನು ವೈದ್ಯನ ಪಾದಕ್ಕೆ ಬಿದ್ದು,— "ನನ್ನನ್ನು ಕ್ಷಮಿಸಿರಿ. ಈ ಕಷ್ಟಗಳಿಗೆಲ್ಲಾ ನಾನೇ ಕಾರಣನಾಗಿದ್ದೇನೆ. ನನ್ನ ಪಾಪಕ್ಕೆ ಪ್ರತಿಫಲವಾಗಿ ನನ್ನಸಂಸಾರದಲ್ಲಿ ಉಂಟಾದ ಛಿದ್ರಗಳು ನಿಮಗೆ ಗೊತ್ತೇ ಇದೆ. ಅದರ ಮೇಲೆ ಈಗ ನಾನು ಅನುಭವಿಸುವ ಯಮ ಯಾತನೆಯನ್ನು ಏನೆಂದು ಹೇಳಲಿ? ಹೇಗಾದರೂ ದೇವಸಿಂಹನ ಜಾಡನ್ನು ಕಂಡುಹಿಡಿಯಿರಿ. ಮಂತ್ರಿ ಏನಾದನೋ ಹುಡುಕಿ ನೋಡಿರಿ. ಅವನು ಯಾವತಪ್ಪನ್ನೂ ಮಾಡಲಿಲ್ಲ; ನಿರ್ದೋಷಿ. ನಾನು ರಾಜ್ಯವನ್ನೆಲ್ಲಾ ಪ್ರಜೆಗಳಿಗೇ ಬಿಟ್ಟುಬಂದುಬಿಟ್ಟೆ. ನಮ್ಮ ಚಿಕ್ಕದೊರೆ ದೇವಸಿಂಹನನ್ನು ಹುಡುಕಿ ತಂದು ಪಟ್ಟಾಭಿಷೇಕಮಾಡಿರಿ. ಅವನಿಗೆ ತಂದೆತಾಯಿಗಳಿಲ್ಲದ ಕೊರತೆಯನ್ನು ನೀವೂ ಮಂತ್ರಿಯೂ ತೀರಿಸಬೇಕು. ಇಷ್ಟು ದೊಡ್ಡ ಪಾಪದಭಾರವನ್ನು ಹೊತ್ತಿರುವ ನಾನು ಪುನಃ ಪ್ರಜೆಗಳ ಕಣ್ಣಿಗೆ ಬೀಳಲಾರೆನು. ಹೇಗೋ ಇಲ್ಲಿಯೇ ಇದ್ದು ಕಾಲಕಳೆಯುತ್ತೇನೆ. ನನ್ನನ್ನು ಆಶೀರ್ವದಿಸಿರಿ" ಎನ್ನುತ್ತಾ ಅತ್ತನು.

ವೈದ್ಯನಹೃದಯವು ಕರಗಿತು. ಶಕ್ತಿಸಿಂಹನಿಗೆ ಧೈರ್ಯವನ್ನು ಹೇಳುತ್ತಾ,—"ಆದರೆ ದೇವಸಿಂಹನ ಜಾಡೆ ನಮಗೆ ಸಿಕ್ಕದು. ಅದಕ್ಕೆ ಅಮಾನುಷ ಶಕ್ತಿಯುಳ್ಳ ಆ ವೃದ್ಧೆಯೇ ಸಮರ್ಥೆ. ಆದ್ದರಿಂದ ನಾವು ಹೋಗಿ ಅವಳನ್ನೆ ಆಶ್ರಯಿಸೋಣ" ಎಂದನು.

ಆದರೆ ದೇವಾಲಯದ ಬಾಗಿಲು ಮುಚ್ಚಿರುವುದರಿಂದ ಒಳಗೆ ಹೋಗಲಾಗಲಿಲ್ಲ. ಇಬ್ಬರೂ ಅಲ್ಲಿಯೇ ಇದ್ದು ಆ ವೃದ್ದೆಯನ್ನು ಎದುರುನೋಡುತ್ತಿದ್ದರು.

---

[ಶಕ್ತಿಸಿಂಹನ ಈ ಬದಲಾವಣೆ ಹಾಗೆಯೇ ಇರುತ್ತದೆಯೆ? ದೇವಸಿಂಹನೂ ಮಂತ್ರಿಯೂ ಏನಾದರು? ವೃದ್ಧೆಯಿಂದ ಶಕ್ತಿಸಿಂಹನಿಗೆ ಸಹಾಯವಾಗುತ್ತದೆಯೇ?—ಇವುಗಳನ್ನೂ ಇನ್ನೂ ಕೆಲವು ವಿಚಿತ್ರಗಳನ್ನೂ ಬರುವತಿಂಗಳು ಓದಿರಿ.]



# ಸ್ವಾಮಿಭಕ್ತಿ



'ಟೋಕಿಯೋ' ಎಂಬುದು ಜಾಪಾನು ದೇಶದ ಮುಖ್ಯಪಟ್ಟಣ. ಆ ಪಟ್ಟಣದಲ್ಲಿ ಒಂದು ದೊಡ್ಡ ಕಾಲೇಜಿಯುಂಟು. 'ಜೋಟೋ' ಎಂಬವನು ಆ ಕಾಲೇಜಿನಲ್ಲಿ ಒಬ್ಬ ಉಪನ್ಯಾಸಕನಾಗಿದ್ದನು.

ಜೋಟೋನು 'ರೀಟಾ' ಎಂಬೊಂದು ನಾಯಿಯನ್ನು ಬಹುಪ್ರೀತಿಯಿಂದ ಸಾಕುತ್ತಿದ್ದನು. ರೀಟಾ ಜೋಟೋನ ಪಂಚಪ್ರಾಣಗಳಲ್ಲಿ ಒಂದಾಗಿತ್ತು. ಹಾಗೆಯೇ ರೀಟಾವಿಗೂ ಯಜಮಾನನಮೇಲೆ ಹೇಳಲಾಗದಷ್ಟು ಭಕ್ತಿವಿಶ್ವಾಸಗಳಿದ್ದುವು.

ನಗರಗಳಲ್ಲಿ ಕೆಲಸಮಾಡುವ ಉದ್ಯೋಗಸ್ಥರು ಸಮೀಪದಲ್ಲಿರುವ ಗ್ರಾಮಗಳಲ್ಲಿ ವಾಸಮಾಡುತ್ತಿದ್ದರು. ಅಂತಹ ಗ್ರಾಮಗಳಿಂದ ಬಲುಬೇಗದಲ್ಲಿಯೇ ನಗರವನ್ನು ಸೇರಲು ಬಸ್ಸುಗಳು, ಎಲೆಕ್ಟ್ರಿಕ್‌ರೈಲುಗಳು ಮೊದಲಾದ ವಾಹನೋಪಾಯಗಳಿದ್ದುವು. ಜೋಟೋ ಕೂಡ ಸುಖಪ್ರದವಾದ ಒಂದು ಗ್ರಾಮದಲ್ಲಿ ವಾಸಮಾಡುತ್ತಿದ್ದ. ಪ್ರತಿದಿನವೂ ಕಾಲೇಜಿಗೆ ಎಲೆಕ್ಟ್ರಿಕ್‌ರೈಲಿನಲ್ಲಿ ಹೋಗಿಬರುತ್ತಿದ್ದ.

ಜೋಟೋ ಮನೆಗೂ ರೈಲುಸ್ಟೈಶನಿಗೂ ಅರ್ಧಮೈಲು ಅಂತರವಿತ್ತು. ಅವನು ಗಂಟೆಗೆ ಸರಿಯಾಗಿ ಊಟಮಾಡಿಕೊಂಡು, ಭೂಷಣ ಹಾಕಿಕೊಳ್ಳುತ್ತಿರುವಾಗ ರೀಟಾ ಬಾಗಿಲ ಬಳಿಯಲ್ಲಿ ಸಿದ್ಧವಾಗಿ ಕಾದುಕೊಂಡಿರುತ್ತಿತ್ತು. ಅವನು ಹೊರಡುತ್ತಲೇ ಅದೂ ಅವನ ಹಿಂದೆಯೇ ಹೊರಟು ರೈಲುಸ್ಟೇಷನ್ನಿನವರೆಗೂ ಬರುತ್ತಿತ್ತು. ರೈಲು ಬರುವವರೆಗೂ ನೋಡುತ್ತಾ ಇದ್ದು, ಯಜಮಾನನು ರೈಲು ಹತ್ತುತ್ತಲೇ ಬಾಲವಾಡಿಸಿಕೊಂಡೇ ಅವನನ್ನು ಕಳುಹಿಸಿ, ಬಳಿಕ ಒಂಟಿಯಾಗಿ ಮನೆಗೆ ಬರುತ್ತಿತ್ತು.

ಜೋಟೋ ನಿತ್ಯವೂ ಸಾಯಂಕಾಲ ನಾಲ್ಕುಗಂಟೆಯ ರೈಲಿಗೆ ಕಾಲೇಜಿನಿಂದ ಹೊರಟು ಮನೆಗೆ ಬರುವುದು ಕ್ರಮ. ರೀಟಾ ಕೂಡಾ ಸರಿಯಾಗಿ ಅದೇಹೊತ್ತಿಗೆ ಮನೆಯಿಂದ ಹೊರಟು ರೈಲುಸ್ಟೇಶನ್ನಿಗೆ ಬಂದು ಯಾಜಮಾನನನ್ನು ಎದುರುನೋಡುತ್ತಿತ್ತು. ಅವನು ಕಣ್ಣಿಗೆ ಬೀಳುತ್ತಲೇ ಅವನೊಂದಿಗೆ ಬಾಲವಾಡಿಸುತ್ತಾ ಮನೆಗೆ ಬರುತ್ತಿತ್ತು.

ಎಸ್. ರಂಗರಾಜ - ಬೆಂಗಳೂರು



ಹೀಗೆಯೇ ಬಹಳ ವರ್ಷಗಳು ಕಳೆದುವು.

ಒಂದುದಿನ ಯಥಾಪ್ರಕಾರ ಜೋಟೋ ಸ್ಟೇಶನ್ನಿನಲ್ಲಿ ನಾಯಿಯನ್ನು ಬಿಟ್ಟು ರೈಲು ಹತ್ತಿ ಕಾಲೇಜಿಗೆ ಹೋದನು. ದುರದೃಷ್ಟ ವಶಾತ್ ಅಲ್ಲಿ ಅವನಿಗೆ ಹಠಾತ್ತನೆ ಏನೋ ನೋವೆದ್ದಿತು. ಅದು ಒಮ್ಮೆಗೇ ಜೋರಾಗಿ ಪ್ರಾಣಕ್ಕೆ ಬಂತು. ಪ್ರಿನ್ಸಿಪಾಲರು ಗಾಬರಿ ಯಾದರು. ಡಾಕ್ಟರನ್ನು ಕರೆಸಲಿಕ್ಕೂ ಸಂಧಿ ಇಲ್ಲದಂತೆ ಸಂದಿಗ್ಧ ಸ್ಥಿತಿಯಾಯಿತು.

ಜೋಟೋ ಪ್ರಿನ್ಸಿಪಾಲರನ್ನು ಕರೆದು ತನ್ನ ಕಟ್ಟಕಡೆಯ ಮಾತನ್ನು ಹೇಳಿದನು. "ಅಯ್ಯಾ, ನಾನು ಇದೇ ಕಾಲೇಜಿನಲ್ಲಿ ಓದಿದೆ. ಇಲ್ಲಿಯೇ ಉದ್ಯೋಗವನ್ನು ಮಾಡಿದೆ. ಈಗ ಇಲ್ಲಿಯೇ ಸಾಯುತ್ತಿದ್ದೇನೆ. ಇನ್ನು ಬಹುವೇಳೆ ಇಲ್ಲ. ನನ್ನನ್ನು ಬದುಕಿಸಲು ಇನ್ನು ವೃಥಾಶ್ರಮ ಪಡಬೇಡಿ. ನನ್ನ ಶವವನ್ನು ಬೇರೆಲ್ಲಿಗೂ ಕಳು ಹಿಸದೆ ಈ ಕಾಲೇಜಿನ ಆವರಣದಲ್ಲಿಯೇ ಭೂಗತ ಮಾಡಿದರೇನೇ ನನ್ನ ಆತ್ಮವು ಸಂತೋ ಷಿಸುತ್ತದೆ"–ಹೀಗೆಂದು ಜೋಟೋ ಶಾಶ್ವತ ವಾಗಿ ಕಣ್ಣು ಮುಚ್ಚಿಬಿಟ್ಟನು. ಅವನ ಕೋರಿಕೆಯಂತಯೇ ಆತನ ಶವಸಮಾಧಿಯೂ ಆಯಿತು.

* * *

ಅವನು ಸತ್ತದಿನ ಸಾಯಂಕಾಲ ರೀಟಾ ನಾಯಿ ಯಥಾಪ್ರಕಾರವಾಗಿ ರೈಲುಸ್ಟೇಶನ್ನಿಗೆ ಬಂದು ಯಜಮಾನನನ್ನು ಎದುರುನೋಡಿತು. ರೈಲುಗಳ ಮೇಲೆ ರೈಲುಗಳು ಬರುತ್ತಾ ಹೋಗುತ್ತಾ ಇದ್ದುವು. ಬಿಗಿಲೂದುತ್ತಾ ಗುಘ್‌ಗುಪ್ಪನೆ ಹೊಗೆಯುಗುಳುತ್ತಾ ಬಂದು ಬಂದು ಹೋಗುತ್ತಿದ್ದುವೇ ಹೊರತು, ಒಂದು ರೈಲಾದರೂ ಜೋಟೋವನ್ನು ಕರೆದುಕೊಂಡು ಬರಲಿಲ್ಲ. ರೀಟಾ ಬಹಳ ಹೊತ್ತಿನವರೆಗೂ ನೋಡಿ ನೋಡಿ ಮನೆಗೆ ತಿರುಗಿಹೋಯಿತು. ಮರುದಿನವೂ ಸ್ಟೇಶನ್ನಿಗೆ ಬಂದು ತುಂಬಾ ಹೊತ್ತು ಇದ್ದು ಇದ್ದು ನೋಡಿ ನೋಡಿ ಹೋಯಿತು.

ಹೀಗೆಯೇ ಪ್ರತಿದಿನವೂ ಬಂದು ಹೋಗುತ್ತಾ ಇತ್ತು. ಮೊದಲು ಸ್ವಲ್ಪಕಾಲದ ವರೆಗೆ ಆ ನಾಯಿಯನ್ನು ಯಾರೂ ಲಕ್ಷಿಸ ಲಿಲ್ಲ; ಅನಂತರ ಸ್ಟೇಷನ್ನುಮಾಸ್ತರರೂ, ಟಿಕ್ಕೆಟ್ಟು ಕಲೆಕ್ಟರರೂ, ಪೋರ್ಟರರೂ "ಇದು ಯಾರ ನಾಯಿ? ದಿನಾ ಸಾಯಂಕಾಲ

ಇಲ್ಲಿಗೆ ಬಂದು ಆ ಕಡೆಯೇ ನೋಡುತ್ತಾ ಇದ್ದು ಹೋಗುತ್ತದೇಕೋ?" ಎಂದು ಯೋಚಿಸಿಕೊಳ್ಳ ತೊಡಗಿದರು.

ಒಬ್ಬರಿಂದೊಬ್ಬರಿಗೆ ಈ ವಿಷಯ ಮಾತಾಡಿಕೊಳ್ಳುತ್ತಿರುವಾಗ, ಅದು ಜೋಟೋ ಎಂಬವನ ನಾಯಿಯೆಂದೂ, ಅವನು ಅಕಸ್ಮಾತ್ತಾಗಿ ಸತ್ತುಹೋದನೆಂದೂ, ಅವನು ಇನ್ನು ಮೇಲೆ ರೈಲಲ್ಲಿ ಬರಲಾರನೆಂದೂ ಎಲ್ಲರಿಗೂ ತಿಳಿಯಿತು. ಆದರೆ ಆ ನಾಯಿಗೆ ಆ ಸಂಗತಿಯನ್ನು ತಿಳಿಯ ಹೇಳುವುದು ಯಾರು? ಅದು ತನ್ನ ಅಭ್ಯಾಸವನ್ನು ಬಿಡದೆ ಪ್ರತಿನಿತ್ಯವೂ ರೈಲುಸ್ಟೇಶನ್ನಿಗೆ ಬಂದುಹೋಗುತ್ತಲೇ ಇತ್ತು.

ಕೆಲವರು ಅದರಮೇಲೆ ಕರುಣೆಗೊಂಡು "ನಿನ್ನ ಯಜಮಾನನು ಸತ್ತುಹೋದನು. ಇನ್ನು ಬಾರನು" ಎಂದು ಅದಕ್ಕೆ ಅರ್ಥವಾಗುವ ಹಾಗೆ ನಾನಾವಿಧ ಹಾವಭಾವಗಳಿಂದ ಹೇಳಿ ನೋಡಿದರು. ಆದರೂ ಅದು ದಿನಾ ಸಂಜೆಯಲ್ಲಿ ತಪ್ಪದೆ ಅಲ್ಲಿಗೆ ಬಂದು ಕಾದುಕಾದು ಹಿಂತಿರುಗುತ್ತಲೇ ಇತ್ತು.

ಕಾಲವು ಉರುಳಿಕೊಂಡು ಹೋಗುತ್ತಲೇ ಇತ್ತು. ತಿಂಗಳುಗಳು, ಸಂವತ್ಸರಗಳು ದಾಟಿದುವು. ಸ್ಟೇಶನ್ನಿನಲ್ಲಿ ರೈಲುವೇ ಕೆಲಸದವರಲ್ಲಿ ಕೆಲವರಿಗೆ ವರ್ಗಾವರ್ಗಿಗಳಾದುವು. ಹೊಸಬರು ಬಂದರು. ಹೊಸಬರಾಗಿ ಬಂದವರಿಗೆಲ್ಲಾ ಸ್ಟೇಶನ್ನಿಗೆ ಬಂದು ಹೋಗುತ್ತಿರುವ ಆ ನಾಯಿಯ ಚರಿತ್ರೆಯೂ ತಿಳಿಯಿತು.



ಪ್ರಭುವಿನಮೇಲೆ ಅದಕ್ಕಿರುವ ಭಕ್ತಿವಿಶ್ವಾಸಗಳನ್ನು ನೋಡಿ ಎಲ್ಲರೂ ಆಶ್ಚರ್ಯಪಡುತ್ತಿದ್ದರು. ಹೊಸ ಹೊಸ ಜನರಿಗೆಲ್ಲಾ ಜೋಟೋ ಅಂದರೆ ಯಾರು ಏನು ಎಂಬ ಅವನ ಚರಿತ್ರೆಕೂಡಾ ಈ ನಾಯಿಯಿಂದ ತಿಳಿದು ಬರುತ್ತಿತ್ತು.

ಕಾಲವುರುಳಿದಂತೆ ರೀಟಾ ಮುದಿಯಾಯಿತು. ಆದರೂ ರೈಲುಸ್ಟೇಷನ್ನಿಗೆ ಬಂದು ಹೋಗುತ್ತಾ ಇತ್ತು. ದೇಹದಲ್ಲಿ ಶಕ್ತಿ ಕಮ್ಮಿಯಾದರೂ ನಡೆಯಲಿಕ್ಕೆ ಕೂಡದಿದ್ದರೂ ಹೇಗಾದರೂ ಮೈಯೆಳೆದುಕೊಂಡು ಬಂದು ಹೋಗುತ್ತಲೇ ಇತ್ತು.

ಹೀಗೆಯೇ ಎಂಟು ವರ್ಷಗಳು ಕಳೆದುವು. ಒಂದುದಿನ ಸಂಜೆಯಲ್ಲಿ ಸ್ಟೇಶನ್ನಿಗೆ ಬಂದ ರೀಟಾ ಪುನಃ ಹಿಂದಿರುಗಿ ಮನೆಗೆ ಹೋಗ

ಲಾರದೆಹೋಯಿತು. ಆದಿನ ರಾತ್ರಿ ಟೋಕಿಯೋನಗರದಿಂದ ಬರುವ ಕಟ್ಟಕಡೆಯ ರೈಲಿನವರೆಗೂ ಅದು ಅಲ್ಲಿಯೇ ನಿಂತು ಶುಷ್ಕ ನೋಟದಿಂದ ನೋಡುತ್ತಿತ್ತು. ಆ ಕಡೇರೈಲು ಹೊರಟುಹೋಗುತ್ತಲೇ ರೀಟಾ ಅಲ್ಲಿಯೇ ಪ್ಲಾಟ್‌ಫಾರಂಮೇಲೆ ಬಿದ್ದು ತನ್ನಪ್ರಾಣವನ್ನು ಬಿಟ್ಟಿತು.

ರೀಟಾನಾಯಿ ಸತ್ತಿತೆಂದು ಕೇಳುತ್ತಲೇ ಚಿಕ್ಕವರು ದೊಡ್ಡವರು ಎಲ್ಲರೂ ಒಂದೇಬಾರಿ ದುಃಖಿಸಿದರು. ಒಬ್ಬ ಯಜಮಾನನನ್ನು ಎಷ್ಟೋ ವಿಶ್ವಾಸದಿಂದ ಸೇವಿಸಿ, ಕಡೆಗೆ ಅವನ ನೆನಪಿನಿಂದಲೇ ಪ್ರಾಣವನ್ನುಕೂಡ ಬಿಟ್ಟ ಆ ಜೀವಿ, ಮನುಷ್ಯನಾದರೇನು? ನಾಯಿಯಾದರೇನು?—ಅದೇ ಧನ್ಯಜೀವಿ! ಎನ್ನುತ್ತಾ ಎಲ್ಲರೂ ಅನೇಕ ವಿಧವಾಗಿ ಮೆಚ್ಚಿಕೊಂಡರು.

ರೀಟಾವನ್ನು ಸ್ವಲ್ಪಕಾಲ ಜೋಟೋ ಸಾಕಿದ. ಆದರೆ ಈಗ ರೀಟಾ ಎಲ್ಲರಿಗೂ ಪ್ರೀತಿಯ ನಾಯಿಯಾಯಿತು. ಅದರ ವಿಶ್ವಾಸವೂ ಸ್ವಾಮಿಭಕ್ತಿಯೂ ಎಲ್ಲರ ಹೃದಯವನ್ನೂ ಕಲಕಿಬಿಟ್ಟುವು. "ಈ ನಾಯಿಯ ಜನ್ಮವು ಮನುಷ್ಯಜನ್ಮಕ್ಕಿಂತಲೂ ಸಾರ್ಥಕವಾಯಿತು!" ಎಂದು ಅನೇಕರು ಹೇಳಿಕೊಂಡರು.

ಇಂತಹ ಶ್ರೇಷ್ಠ ನಾಯಿಯ ಶವವನ್ನು ಸುಮ್ಮನೆ ಬಿಡಬಹುದೆ? ಎಲ್ಲರೂ ರೀಟಾವನು ಗೌರವಿಸಬೇಕೆಂದು ತೀರ್ಮಾನಿಸಿದರು. ಕೂಡಲೇ ಒಂದು ಉತ್ತಮವಾದ ಹೂವಿನ ರಥವನ್ನ ನಿರ್ಮಾಣಮಾಡಿದರು. ಆ ರಥದ ಮೇಲೆ ಅದರ ಶವವನ್ನಿಟ್ಟು ಬಲು ವೈಭವದಿಂದ ಮೆರವಣಿಗೆ ಮಾಡಿಸಿದರು. ದೂರ ಪ್ರಾಂತಗಳಿಂದಲೂ ಜನರು ಬಂದು ಆ ಉತ್ಸವದಲ್ಲಿ ಪಾಲುಗೊಂಡರು.

ಹಾಗೆ ಮೆರವಣಿಗೆಯಾದಮೇಲೆ, ರೀಟಾ ಪ್ರತಿದಿನವೂ ಬಂದು ಹೋಗುತ್ತಿದ್ದ ಆ ಸ್ಟೇಶನ್ನಿನ ಎದುರಿನಲ್ಲಿಯೇ ಅದನ್ನು ಭೂಗತ ಮಾಡಿ, ಅದರಮೇಲೆ ಅದ್ಭುತವಾದೊಂದು ಗೋರಿಯನ್ನು ಕಟ್ಟಿಸಿದರು.

ಆ ಗೋರಿಯಮೇಲೆ, ರೀಟಾನಾಯಿಯ ಆದರ್ಶಚರಿತ್ರೆಯನ್ನು, ಸುವರ್ಣಾಕ್ಷರಗಳಿಂದ ಕೆತ್ತಿಸಿದರು. ರೀಟಾನಾಯಿಯ ಕೀರ್ತಿಯನ್ನು ಸಾರುವ ಆ ಅಕ್ಷರಗಳನ್ನು, ಆ ಗೋರಿಯ ಕಲ್ಲಿನಲ್ಲಿ ಈಗಲೂ ನಾವು ನೋಡಬಹುದು.





ಮೊದಲು ಮಗಧರಾಜ್ಯದಲ್ಲಿ ಸುಗುಣವರ್ಮ ನೆಂಬ ದೊರೆ ಆಳುತ್ತಿದ್ದ. ಅವನು ನಲುವತ್ತು ವರ್ಷಗಳ ವರೆಗೆ ರಾಜ್ಯವಾಳಿದ. ಅವನ ಆಳಿಕೆಯಲ್ಲಿ ದೇಶವು ಪೈರುಪಚ್ಚೆಗಳಿಂದಲೂ, ಸಿರಿಸಂಪತ್ತಿನಿಂದಲೂ ಸುಭಿಕ್ಷವಾಗಿತ್ತು. ಆದುದರಿಂದ ಪ್ರಜೆಗಳೆಲ್ಲಾ ಏನೊಂದೂ ಕೊರತೆಯಿಲ್ಲದೆ ಸುಖವಾಗಿದ್ದರು.

ಸುಗುಣಸಿಂಹನಿಗೆ ವೃದ್ಧಾಪ್ಯವು ಬಂತು. ಇನ್ನು ರಾಜ್ಯಭಾರ ನಿರ್ವಹಣೆಯನ್ನು ಕುಮಾರನಿಗೆ ವಹಿಸಿ, ತಾನು ದೈವಚಿಂತನೆ ಯಿಂದ ಕಾಲಹರಣ ಮಾಡಬೇಕೆಂದು ಯೋಚಿಸಿದನು. ಒಂದು ಹುಣ್ಣಿಮೆಯರಾತ್ರಿ ಇದೇ ಆಲೋಚನೆಯನ್ನು ಮಾಡುತ್ತ, ತನ್ನ ಅಂತಃಪುರದಲ್ಲಿ ಅತ್ತಿತ್ತ ತಿರುಗಾಡುತ್ತಿದ್ದನು. ಊರೆಲ್ಲಾ ಗಾಢನಿದ್ರೆಯಿಂದ ನಿಃಶಬ್ದವಾ ಗಿತ್ತು. ಕೋಟೆಯೊಳಗಿನ ಗಂಟೆ "ಢಾಂಗ್ ಢಾಂಗ್" ಎಂದು ಹನ್ನೆರಡುಸಾರಿ ಹೊಡೆದು ಎಚ್ಚರಿಕೆ ಕೊಟ್ಟಿತು

ಇನ್ನುಮಲಗೋಣವೆಂದು ರಾಜನು ಹಂಸ ತೂಲಿಕಾತಲ್ಪದ ಕಡೆಗೆ ತಿರುಗಿದಾಗ, ಜಗ ಜಗಿಸುವ ದೃಶ್ಯವೊಂದನ್ನು ನೋಡಿದನು. ಅದೇನು? ದಿವ್ಯವಾದ ಪುತ್ಥಳಿಚಿನ್ನದ ಕಾಂತಿ ಯಿಂದೊಪ್ಪುವ ದೇಹದಿಂದ ಶೋಭಿಸುತ್ತ, ಸುಂದರಿಯೊಬ್ಬಳು ಆ ತಲ್ಪದಮೇಲೆ ಕುಳಿ ತಿದ್ದಾಳೆ! ಅಪರಿಚಿತಳಾದ ಅವಳನ್ನು ನೋಡಿ ರಾಜನ ಆಶ್ಚರ್ಯಕ್ಕೆ ಮೇರೆಯೇ ಇರಲಿಲ್ಲ.

"ರಾಜೇಂದ್ರ! ನನ್ನನ್ನು ಅರಿಯೆಯಾ?" ಎಂದು ಸುಂದರಿ ಮಧುರವಾಗಿ ಕೇಳಿದಳು. ರಾಜನು ಏನೂ ತೋರದೆ ನಿಂತನು.

"ನನ್ನ ಹೆಸರು ಯಶೋದೇವಿ. ನೀನು ನೀತಿ-ಧರ್ಮಗಳನ್ನು ತಪ್ಪದೆ ರಾಜ್ಯವನ್ನು ಪಾಲಿಸಿ, ನಿನ್ನ ಕೀರ್ತಿಯನ್ನು ಹತ್ತು ದಿಕ್ಕು ಗಳಲ್ಲಿಯೂ ವ್ಯಾಪಿಸುವಂತೆ ಮಾಡಿದವಳು ಯಾರು ಗೊತ್ತೆ? ನಾನೇ!" ಎಂದಳು. ರಾಜನು ಬಹಳ ಸಂತೋಷದಿಂದ—"ದೇವಿ! ನನ್ನ ಯಶಸ್ಸಿಗೆ ಕಾರಣಳಾದ ನಿನಗೆ ತುಂಬಾ ಕೃತಜ್ಞನಾಗಿದ್ದೇನೆ. ಆದರೆ ಇನ್ನುಮುಂದೆ ನನ್ನ ಕುಮಾರನ ರಾಜ್ಯಭಾರದಲ್ಲಿ ನೀತಿ-ಧರ್ಮ ಗಳು ಹೇಗೆ ನೆಲೆಸುವುವೋ ಎಂದು ನನಗೀಗ ಯೋಚನೆಯಾಗಿದೆ" ಎಂದನು.

ಟಿ. ಸಾವಿತ್ರಿ, ಕೋಲಾರ



ಹೀಗಿರಲು ಒಂದು ಹುಣ್ಣಿಮೆಯ ರಾತ್ರಿ, ಸುಗುಣವರ್ಮನಿಗೆ ಕಾಣಿಸಿದಂತೆಯೇ, ಧೀರ ವರ್ಮನಿಗೂ ಯಶೋದೇವಿ ಕಾಣಿಸಿದಳು. ಧೀರವರ್ಮನು ಭಕ್ತಿಯಿಂದಲೂ ವಿನಯ ದಿಂದಲೂ ಅವಳಿಗೆ ವಂದಿಸಿದನು. ದೇವಿ ಧೀರವರ್ಮನಿಗೆ ಹರಸುತ್ತ—"ಕುಮಾರಾ! ಈ ಉಂಗರವನ್ನು ಹಿಡಿ. ಇದೇ ನಿನಗೆ ಅಂಗ ರಕ್ಷೆ. ಯಾವಾಗ ನಿನ್ನ ಬುದ್ಧಿ ಧರ್ಮಮಾರ್ಗ ದಿಂದ ಅತ್ತ ತಿರುಗುತ್ತದೋ ಆಗ ಈ ಉಂಗ ರವು ನಿನ್ನ ಬೆರಳನ್ನು ಚಿವುಟಿ ನಿನ್ನನ್ನು ಎಚ್ಚರಿಸುತ್ತದೆ. ಅದನ್ನು ಗಮನಿಸಿ ನೀನು ಸರಿಯಾದ ದಾರಿಯಲ್ಲೇ ನಡೆಯುತ್ತಿರು." ಎಂದು ಬೋಧಿಸಿ ಒಂದು ಉಂಗರವನ್ನು ಕೊಟ್ಟು ಅಂತರ್ಹಿತೆಯಾದಳು.

ಅವಕ್ಕೆ ಯಶೋದೇವತೆ—"ರಾಜಾ, ದಿಗಿಲುಪಡಬೇಡ. ನಿನ್ನನ್ನು ನಡೆಯಿಸಿ ದಂತೆಯೇ ನಿನ್ನ ಮಗನನ್ನೂ ನಡೆಸುತ್ತೇನೆ. ಚಿಂತಿಸಬೇಡ" ಎಂದಂದು ಅಂತರ್ಧಾನವಾಗಿ ಹೋದಳು.

ನಂತರ ಕೆಲವು ದಿನಗಳಮೇಲೆ ಸುಗುಣ ವರ್ಮನು ತೀರಿಹೋದನು.

ಸುಗುಣವರ್ಮನ ಕುಮಾರ ಧೀರವರ್ಮನು ಗದ್ದುಗೆಯನ್ನೇರಿ ಎಲ್ಲಾ ವಿಧದಲ್ಲಿಯೂ ತಂದೆಗೆ ತಕ್ಕ ಪುತ್ರನೆಂದು ಹೆಸರುಪಡೆದನು. ತಂದೆಯ ಕಾಲದಿಂದ ಪ್ರಥಮಮಂತ್ರಿಯಾಗಿದ್ದ ವೃದ್ಧ ನಾದ ಧರ್ಮಪಾಲನನ್ನೆ ತನ್ನ ಸಲಹೆಗಾರ ನನ್ನಾಗಿ ನಿಯಮಿಸಿ ಕೊಂಡನು. ಇದರಿಂದ ರಾಜ್ಯಪಾಲನೆ ಸುಗಮವಾಗಿ ನಡೆಯಿತು. ಸ್ವಲ್ಪಕಾಲ ಏನೂ ವಿಶೇಷವಿರಲಿಲ್ಲ.

ದೇವಿಯ ದಯೆಗಾಗಿ ಸಂತೋಷಪಡುತ್ತ ಧೀರವರ್ಮನು, ತನಗೆ ಅಂಗರಕ್ಷೆಯಾಗಿ ಪ್ರಸಾ ದಿಸಲ್ಪಟ್ಟ ಆ ಉಂಗುರವನ್ನು ಉತ್ಸಾಹದಿಂದ ಧರಿಸಿಕೊಂಡನು.

ಆ ಉಂಗರದ ಮಹಿಮೆಯಿಂದಲೂ, ಮಂತ್ರಿ ಧರ್ಮಪಾಲನ ಸಲಹೆಯಿಂದಲೂ ಅವನ ರಾಜ್ಯಭಾರವು ಬಹುಕಾಲ ಧರ್ಮ ದಿಂದಲೇ ಸಾಗಿತು.

ಆದರೆ ಮತ್ತೆ ಮತ್ತೆ ಯುವಕನಾದ ಧೀರ ವರ್ಮನಿಗೆ ಮೆಲ್ಲಮೆಲ್ಲನೆ ಆಶೆ-ಅತೃಪ್ತಿಗಳು ಬರಲಾರಂಭಿಸಿದುವು. ಅದಕ್ಕೆತಕ್ಕ ಕೃತಿಗಳೂ ಹೊರಡಲಾರಂಭಿಸಿದುವು. ಮನಸ್ಸು ಬದ ಲಾವಣೆಹೊಂದಿತು. ಇದು ಧರ್ಮ ಇದು

ಅಧರ್ಮ ಎಂಬ ತಾರತಮ್ಯ ಜ್ಞಾನವು ಇಲ್ಲದೆ ಹೋಯಿತು. ದುರಾಶೆ ಹೆಚ್ಚಿತು. ದುಷ್ಟ ಸಂಕಲ್ಪಗಳಿಗೆ ಗಾಳಿಹಾಕುವಂತಹ ದುಷ್ಟ ಪರಿವಾರವು ರಾಜನಸುತ್ತೂ ಸೇರಿದರು.

ಆ ದುಷ್ಟಪರಿವಾರಕ್ಕೆ ದುರ್ದಮನನೆಂಬ ವನು ಮುಖಂಡನಾಗಿದ್ದ. ಅವನಿಗೂ ರಾಜ ನಿಗೂ ತುಂಬಾ ಅಚ್ಚು ಮೆಚ್ಚಾಯಿತು. "ರಾಜ ನಾದವನು ಯಾವಾಗಲೂ ರಾಜ್ಯವಿಸ್ತಾರಣ ಮಾಡುತ್ತಲೇ ಇರಬೇಕು. ಖಜಾನೆ ತುಂಬಿಸಿ ಕೊಂಡೇ ಬರಬೇಕು" ಎಂದು ಮುಂತಾಗಿ ದುರ್ದಮನನು ದುರ್ಬೋಧನೆಮಾಡುತ್ತಾ ಧೀರವರ್ಮನ ಮನಸ್ಸನ್ನು ತಿರುಗಿಸಿಬಿಟ್ಟನು. ವೃದ್ಧಮಂತ್ರಿ ಧರ್ಮಪಾಲನ ನೀತಿಮಾತು ಗಳು ರಾಜನ ಕಿವಿಗೆ ವಿರದಂತಾಯಿತು. ಮುದಿಮಂತ್ರಿ ಸುಮ್ಮನಿದ್ದು ಖಿನ್ನನಾದನು. ಚಿಂತೆಯಿಂದ ಮೂಲೆಸೇರಬೇಕಾಯಿತು ವೃದ್ಧಮಂತ್ರಿ.

ಧೀರವರ್ಮನು ಅಕಾರಣವಾಗಿ ಅನ್ಯಾಯ ವಾಗಿ ಅಕ್ಕಪಕ್ಕದ ಸಾಮಂತ ರಾಜರಮೇಲೆ ದಾಳೀತೆಗೆದು ಲೂಟಿಮಾಡ ಲಾರಂಭಿಸಿದನು. ದುಷ್ಟತನವೂ, ಹಟವೂ, ಕ್ರೌರ್ಯವೂ ಅವ ನಲ್ಲಿ ದಿನೇದಿನೇ ಅಭಿವೃದ್ಧಿಯಾಯಿತು. ಮೈಮರೆತುಹೋದನೆಂದರೂ ಅತಿಶಯವಲ್ಲ.

ಏಕೆಂದರೆ ಅವನು ಕೆಟ್ಟಕೆಲಸಕ್ಕೆ ತೊಡ ಗಿದಾಗಲೆಲ್ಲಾ ಅಂಗರಕ್ಷೆಯಾಗಿರುವ ಆ ಉಂಗರವು ಅವನನ್ನು ಚಿವುಟುತ್ತಲೇ ಇದ್ದಿತು. ಆದು ಅವನಿಗೆ ಕೊಂಚವೂ ತಿಳಿಯಲೇಇಲ್ಲ!



ಧೀರವರ್ಮನು ಈಗ ಮೊದಲನೆಯ ಧೀರ ವರ್ಮನಲ್ಲ. ಈಗಿನ ಧೀರವರ್ಮ ಬಹಳ ದುಷ್ಟ, ದರ್ಪಾಗ್ನಿ, ಕ್ರೂರ. ಅನೇಕ ಸಣ್ಣ ಸಣ್ಣ ರಾಜ್ಯಗಳನ್ನು ಸೂರೆಮಾಡಿಕೊಂಡು ಬಿಟ್ಟನು. ತನ್ನ ಸುಖಸ್ವಾರ್ಥಗಳಿಗಾಗಿ ಪ್ರಜೆ ಗಳಮೇಲೆ ವಿಧವಿಧವಾದ ಕರಗಳನ್ನು ಹೇರಿ ದನು. ಪ್ರಜೆಗಳೆಲ್ಲಾ ಯಮಯಾತನೆಯನ್ನು ಅನುಭವಿಸುತ್ತಿದ್ದರು. ಪ್ರಭುವಿನಮೇಲೆ ಪ್ರಜೆ ಗಳಿಗಿರುವ ಭಕ್ತಿ ವಿಶ್ವಾಸಗಳು ನಶಿಸಿ ಹೋದುವು. ಅವನ ದುಷ್ಟಚರ್ಯಗಳಿಗೆ ರಾಜಾಂಗದ ಸೈನಿಕರುಕೂಡ ಅಸಹ್ಯಪಡು ತ್ತಿದ್ದರು. ಇನ್ನು ಬೇರೆಯವರ ವಿಷಯ ಕೇಳಬೇಕೆ?

ದುಷ್ಟತನದ ತುಟ್ಟತುದಿಯನ್ನೆ ಮುಟ್ಟಿ ದನು ಧೀರಸಿಂಹ. ಕಡೆಗೆ ಅವನಮೇಲೆ ಅವ

ನಿಗೇ ಅಸಹ್ಯಬರುವಂತೆ, ಪ್ರಜೆಗಳ ಗೋಳಾಟ ಅವನ ಕಿವಿಯನ್ನು ಕೊರೆಯಿತು. ಅಂಗ ರಕ್ಷೆಯ ಉಂಗುರವಂತೂ ಅವನಿಗೆ ಚಿವು ಟುತ್ತಲೇ ಉಂಟಷ್ಟೆ? ಆಗ ಅವನಿಗೆ ಕೊಂಚ ಕೊಂಚ ಬುದ್ಧಿ ಬರುತ್ತಿತ್ತು. "ಎಲ್ಲರನ್ನೂ ಗೋಳಾಡಿಸಿ, ನಾನೇನು ಸಂಪಾದಿಸಿದೆ? ಏಕೆ? ನನಗೇನು ಅಷ್ಟುಕಡಮೆಯಾಗಿತ್ತು?" ಎಂದು ತನ್ನಲ್ಲಿತಾನೇ ಕೇಳಿಕೊಳ್ಳ ತೊಡಗಿ ದನು. ಮನಸ್ಸು ಅತ್ತಿತ್ತ ಹೊಯ್ದಾಡ ತೊಡ ಗಿತು. ತಂದೆಯಕಾಲದ ವೃದ್ಧಮಂತ್ರಿಯ ಸಲಹೆಗಳನ್ನು ಮೀರಿದೆನಲ್ಲ ಎಂದು, ಕೆಲವು ಬಾರಿ ಪಶ್ಚಾತ್ತಾಪವನ್ನೂ ಪಟ್ಟನು. ಆದರೆ ಸ್ಥಿರತೆ ಬರಲಿಲ್ಲ.

ಮುಂದೆ ಆ ವೃದ್ಧಮಂತ್ರಿ ಸತ್ತುಹೋದನು. ರಾಜನ ಹಿತಚಿಂತಕರಂತೆ ವೇಷಹಾಕಿಕೊಂಡು ಸೇರಿದ ದುಷ್ಟರು ರಾಜಬೊಕ್ಕಸವನ್ನು ಮೆಲ್ಲ ಮೆಲ್ಲನೆ ಅಪಹರಿಸಲಾರಂಭಿಸಿದರು. ರಾಜ್ಯ ದಲ್ಲಿ ಕಳ್ಳತನಗಳೂ ಹತ್ಯೆಗಳೂ ಹೆಚ್ಚಿಕೊಂಡು ಬಂದುವು. ಅರಮನೆಯಲ್ಲಿಯೇ ಒಮ್ಮೆ ಗಲಾಟೆಯೆದ್ದಿತು. ದುಷ್ಟರ ಮುಖಂಡನಾದ ದುರ್ದಮನನು ತನ್ನ ರಹಸ್ಯವನ್ನು ಬಯಲು ಮಾಡಿದಳೆಂದು, ರಾಜನ ಸೋದರ ಸೊಸೆ ಯನ್ನು ಹಿಡಿದು ಗಲ್ಲಿಗೆಹಾಕಲಿರುವನೆಂದು ಗೊತ್ತಾಯಿತು. ಧೀರವರ್ಮನ ಬೆರಳ ಉಂಗು ರವೂ ವಿಶೇಷಕಾಂತಿಯಿಂದ ಬೆಳಗುತ್ತ ಜೋರಾಗಿ ಅವನನ್ನು ಚಿವುಟುತ್ತಿತ್ತು. ಈಗ ಅವನು ಪೂರ್ಣ ಅರಿವಿಗೆಬಂದನು.

ಧೀರವರ್ಮನಿಗೆ ತನ ಸೋದರ ಸೊಸೆಯ ಮೇಲೆ ತುಂಬಾ ಪ್ರೀತಿ. ಈಗ ಅವಳ ಜೀವಕ್ಕೆ ಆಪತ್ತು ಬಂದಿರುವುದನ್ನು ತಿಳಿದು ಕೋಪ ವೇರಿತು. ಧೈರ್ಯಸ್ಥೈರ್ಯಗಳು ನೆಲೆಸಿದುವು. ವೀರಾವೇಶದಿಂದ ಹೋಗಿ ದ್ರೋಹಿಗಳನ್ನು ಹೆದ ರಿಸಿ, ಎಲ್ಲರನ್ನೂ ಸೆರೆಹಿಡಿಸಿ, ತನ್ನ ಪ್ರೀತಿಯ ಸೋದರ ಸೊಸೆಯನ್ನು ಕಾಪಾಡಿದನು.

ಈಗ ಅವನಿಗೆ ಸರಿಯಾದ ಜ್ಞಾನೋದಯ ವಾಗಿತ್ತು. ತನ್ನನ್ನು ಬಿಡದೆ ಕಾಪಾಡುತ್ತಿದ್ದ ಅಂಗರಕ್ಷೆಯ ಉಂಗರವನ್ನು ಪೂರ್ತಿಯಾಗಿ ನಂಬಿದನು. ಬಂದ ಅಪಕೀರ್ತಿಯನ್ನು ಹೋಗಲಾಡಿಸಿಕೊಳ್ಳುವೆನೆಂದು ಪ್ರತಿಜ್ಞೆ ಮಾಡಿದನು. ಅಂದಿನಿಂದ ಧೀರವರ್ಮನು ನೀತಿ-ಧರ್ಮಗಳನ್ನು ಬಿಡದೆ ರಾಜ್ಯವಾಳುತ್ತಾ ಉತ್ತಮ ಯಶಸ್ಸನ್ನು ಗಳಿಸಿದನು.



# ಜೇನಿನ ಬಿಂದು

ಲಕ್ಷ್ಮೀದೇವಿಯ ಕುಮಾರನು ಮನ್ಮಥ. ಪ್ರಪಂಚದ ಗಂಡಸರೊಳಗೆಲ್ಲಾ ಮನ್ಮಥನೇ ಬಲುಚೆಲುವ. ಅವನಿಗೆ ತಕ್ಕ ಚೆಲುವೆಯಾದ ರತೀದೇವಿ ಎಂಬ ಹುಡುಗಿಯನ್ನು ಮದುವೆ ಮಾಡಿಸಿದ್ದರು. ಮನ್ಮಥನೂ ರತೀದೇವಿಯೂ ತುಂಬಾ ಪ್ರೇಮದಿಂದಿದ್ದರು.

ಒಂದಾನೊಂದು ಬಾರಿ ಆ ದಂಪತಿಗಳೊಳಗೆ ಏನೋ ಜಗಳವುಂಟಾಯಿತು. ಅದರಲ್ಲಿ ತಪ್ಪೇನೋ ಮನ್ಮಥನದೇ ಆಗಿತ್ತು. ಅವನು ತಪ್ಪನ್ನು ಒಪ್ಪಿಕೊಂಡು ಎಷ್ಟು ಹೇಳಿಕೊಂಡರೂ ರತೀದೇವಿಯ ಕೋಪ ತಣಿಯಲಿಲ್ಲ. ಬೇಸರಪಟ್ಟು ಮನ್ಮಥನು ಒಂದು ಅಡವಿಗೆ ಹೋಗಿ ಯೋಚಿಸುತ್ತಾ ಕುಳಿತನು.

ಅಲ್ಲಿಗೆ ಅವನ ಸ್ನೇಹಿತನಾದ 'ಅನಿಲ'ನು ಬಂದನು. ಮನ್ಮಥನ ಚಿಂತೆಯ ಕಾರಣವನ್ನು ಕೇಳಿ ತಿಳಿದುಕೊಂಡು,—"ಇದಕ್ಕೆ ಚಿಂತಿಸಬೇಡ. ಈ ಅಡವಿಯೊಳಗೆ ವಿಶೇಷವಾದ ಒಂದು ಬಳ್ಳಿಯುಂಟು. ಅದು ಸಪ್ತವರ್ಣಗಳಿಂದ ಜಗಜಗಿಸುತ್ತಿದೆ. ಬಳ್ಳಿಯ ತುಂಬಾ ಹೂಗಳುಂಟು. ಹೂವಿನತುಂಬಾ ಜೇನುಂಟು. ಆ ಜೇನನ್ನಿಷ್ಟು ನಾನು ನಿನಗೆ ತಂದುಕೊಡುತ್ತೇನೆ. ರತೀದೇವಿ ನಿದ್ರೆಯಲ್ಲಿದ್ದಾಗ ಅವಳ ರೆಪ್ಪೆಗಳಮೇಲೆ ಒಂದೊಂದು ಬಿಂದು ಜೇನನ್ನು ತಡವಿಬಿಡು. ಅವಳ ಸಿಟ್ಟೆಲ್ಲಾ ಇಳಿದು ಹೋಗುತ್ತದೆ. ಅವಳು ನಿದ್ರೆಯಿಂದ ಏಳುವಾಗ ನೀನು ಅವಳ ಇದಿರಿನಲ್ಲಿಯೇ ಇರಬೇಕು. ಆ ಜೇನಿನ ಮಹಿಮೆಯಿಂದ, ಕೋಪದ ನೆನಪೇ ಇಲ್ಲದೆ, ನಿನ್ನೊಡನೆ ಪ್ರೇಮದಿಂದ ಮಾತಾಡುವಳು." ಎಂದು ಸಲಹೆ ಹೇಳಿದನು. ಮನ್ಮಥನಿಗೆ ಸಮಾಧಾನವಾಯಿತು. ಧೈರ್ಯಬಂತು. "ಹಾಗೆಯೇ ಮಾಡುವೆನು. ನೀನು ಆ ಜೇನನ್ನು ನನಗೆ ತಂದುಕೊಡು" ಎಂದು ಹೇಳಿ ಅನಿಲನನ್ನು ಕಳುಹಿಸಿದನು.

ಅನಿಲನು ಮರಳಿ ಬರುವುದನ್ನೆ ಕಾದುಕೊಂಡಿರುವಾಗ "ತಸನಾ! ತಪನಾ! ನನ್ನನ್ನು ಬಿಟ್ಟು ಹೋಗಬೇಡ!" ಎಂದು ಕೂಗುವ ಹೆಂಗುಸಿನ ಕಂಠಸ್ವರವೊಂದು ಮನ್ಮಥನ ಕಿವಿಗೆಬಿತ್ತು. ಮಾಯಾವಿದ್ಯೆಗಳನ್ನು ಬಲ್ಲ ಮನ್ಮಥನು, ಕೂಡಲೇ ಅದೃಶ್ಯನಾಗಿ, ಹಾಗೆ

ಕೆ. ಸಿ. ಬಸವರಾಜ, ಸಿರಗುಪ್ಪೆ



ಕೂಗಿದವಳು ಯಾರೆಂದು ನೋಡುತ್ತ ಅಲ್ಲಿಯೇ ನಿಂತನು. ಆಗೊಂದು ವಿಚಿತ್ರ ದೃಶ್ಯವು ಅವನ ಕಣ್ಣಿಗೆ ಬಿತ್ತು.

ಕೂಗಿದವಳು ಒಬ್ಬಳು ಗಂಧರ್ವಕುಮಾರಿಯಾಗಿದ್ದಳು. ಅವಳ ಹೆಸರು ಛಾಯಾದೇವಿ. ಅವಳು ತಪನನೆಂಬ ಗಂಧರ್ವನನ್ನು ನಂಬಿಕೊಂಡು ಬಂದಿದ್ದಳು. ಅವನು ಅವಳನ್ನು ನಡುದಾರಿಯಲ್ಲೆ ಬಿಟ್ಟು, ಓಡುತ್ತಿದ್ದನು. ಅವನು ಛಾಯಾದೇವಿಯನ್ನು ವರಿಸುವೆನೆಂದು ಅವಳಿಗೆ ಮಾತುಕೊಟ್ಟಿದ್ದನು. ಆಮೇಲೆ "ವನರಮ" ಎಂಬವಳನ್ನು ನೋಡಿ ಛಾಯಾದೇವಿಗೆ ಮೋಸಮಾಡಲು ಯತ್ನಿಸುತ್ತಿದ್ದನು.

ಹಾಗೆ ಓಡುತ್ತ ತಪನನು ಕಣ್ಮರೆಯಾಗಿ ಹೋದನು. ಛಾಯಾದೇವಿ ಅಳುತ್ತಾ ಅವನ ಹಿಂದೆಯೇ ಓಡಿದಳು.

ಅಲ್ಲಿಯೇ ಅದೃಶ್ಯನಾಗಿದ್ದುಕೊಂಡು ಇದೆಲ್ಲಾ ನೋಡಿ ಗ್ರಹಿಸಿದ ಮನ್ಮಥನು, ಹೇಗಾದರೂ ಇದನ್ನು ಸರಿಪಡಿಸಬೇಕೆಂದು ಯೋಚಿಸಿಕೊಂಡನು.

ಅಷ್ಟರಲ್ಲಿ ಅನಿಲನು ಒಂದು ದೊನ್ನೆಯಲ್ಲಿ ಜೇನನ್ನು ತೆಗೆದುಕೊಂಡು ಬಂದನು.

ಮನ್ಮಥನು ಛಾಯಾ-ತಪನರ ವಿಷಯವನ್ನು ಹೇಳಿ, "ಅನಿಲಾ, ಆ ತಪನನ ರೆಪ್ಪೆಗಳಿಗೆ ಈ ಜೇನಿನ ಬಿಂದುಗಳನ್ನು ಹಚ್ಚಿ ಬಾ" ಎಂದನು.

ಅನಿಲನು ಅವರನ್ನು ಹುಡುಕುತ್ತಾ ಹೊರಟನು. ಸಮೀಪದಲ್ಲಿಯೇ ಒಬ್ಬ ಗಂಧರ್ವಕುಮಾರನೂ, ಒಬ್ಬಳು ಗಂಧರ್ವಕುಮಾರಿಯೂ ಮಲಗಿ ನಿದ್ರೆಮಾಡುತ್ತಿದ್ದರು. ಅನಿಲನು ಆ ಗಂಧರ್ವನ ರೆಪ್ಪೆಗಳಮೇಲೆ ಎರಡು ಜೇನಿನ ಚುಕ್ಕೆಗಳನ್ನು ಹಾಕಿ ಮನ್ಮಥನ ಬಳಿಗೆ ಬಂದುಬಿಟ್ಟನು.

ಆದರೆ ಆ ನಿದ್ರಿಸಿದ್ದವನು ತಪನನೇ ಅಲ್ಲ! ಆ ಕುಮಾರಿ ಛಾಯಾದೇವಿಯೂ ಅಲ್ಲ!! ಅವನು 'ವಸಂತ'ನೆಂಬ ಇನ್ನೊಬ್ಬ ಗಂಧರ್ವ. ಆ ಕುಮಾರಿಯೇ 'ವನರಮೆ'. ಇವಳು ಛಾಯಾದೇವಿಯ ಸ್ನೇಹಿತೆಯಾಗಿದ್ದಳು. ಇವಳು ವಸಂತನನ್ನೂ ವಸಂತನು ಇವಳನ್ನೂ ಪರಸ್ಪರ ಪ್ರೇಮಿಸಿದ್ದರು. ಇಬ್ಬರೂ ಅಡವಿಯೊಳಗೊಂದು ದೇವಾಲಯಕ್ಕೆ ಹೋಗಿ ಬರುತ್ತ, ಹಾಗೆ ನಿದ್ದೆ ಮಾಡಿದ್ದರು. ಮನ್ಮಥನು ಹೇಳಿದ ಛಾಯಾದೇವಿಯೂ ತಪನನೂ

ಇವರೇ ಆಗಿದ್ದಾರೆಂದು ತಿಳಿದು, ಅನಿಲನು, ವಸಂತನ ರೆಪ್ಪೆಗಳಿಗೆ ಆ ಅದ್ಭುತಗುಣವುಳ್ಳ ಜೇನನ್ನು ಹಚ್ಚಿಬಿಟ್ಟದ್ದನು.

ವಸಂತನು ಸ್ವಲ್ಪಹೊತ್ತಿಗೆಲ್ಲಾ ಕಣ್ಣು ತೆರೆದ. ಆಗ ಛಾಯಾದೇವಿ ತಪನನನ್ನು ಹುಡುಕುತ್ತಾ ಅವನಿದಿರೇ ಬರುತ್ತಿದ್ದಳು. ಕೂಡಲೇ ವಸಂತನು ಆ ಜೇನಿನ ಪ್ರಭಾವದಿಂದ ವನರಮೆಯನ್ನು ಮರೆತು, ಛಾಯಾದೇವಿಯನ್ನೆ ಪ್ರೇಮದಿಂದ ಕರೆಯಲಾರಂಭಿಸಿದನು.

ಛಾಯಾದೇವಿಗೆ ಆಶ್ಚರ್ಯವೂ ದುಃಖವೂ ಒಂದೇಬಾರಿಗೆ ಉಕ್ಕಿ ಬಂತು. "ನನ್ನ ಸ್ನೇಹಿತೆಯಾದ ವನರಮೆಗೆ ಮೋಸಮಾಡಿ, ಈ ವಸಂತ ನನ್ನನ್ನು ಮಾತಾಡಿಸುತ್ತಾನಲ್ಲ! ಎಂತಹ ದುಷ್ಟ! ಎಂತಹ ದ್ರೋಹಿ!" ಎಂದುಕೊಳ್ಳುತ್ತಾ, ಛಾಯಾದೇವಿ ವಸಂತನಿಗೆ ಸಿಕ್ಕದೆ ಸರಸರನೆ ಓಡಿಹೋದಳು. ಅವಳನ್ನು ಹುಡುಕುತ್ತಾ ವಸಂತನೂ ಹೋದ.

ವಸಂತನು ಹೊರಟುಹೋದ ಬಹಳ ಹೊತ್ತಿನಮೇಲೆ ವನರಮೆಗೆ ಎಚ್ಚರಿಕೆಯಾಯಿತು. ಎದ್ದುನೋಡಿದರೆ ವಸಂತನಿಲ್ಲ! ಅವಳಿಗೆ ಗಾಬರಿಯಾಯಿತು. ಅಡವಿಯೊಳಗೆಲ್ಲಾ ಹುಡುಕತೊಡಗಿದಳು. ವಸಂತನು ಕಾಣಿಸಲಿಲ್ಲ. ಬದಲಾಗಿ ಛಾಯಾದೇವಿಯನ್ನು ತಪ್ಪಿಸಿಕೊಂಡು ಅವಳನ್ನೆ ಹುಡುಕುತ್ತ ಬಂದ ತಪನನು ಕಣ್ಣಿಗೆಬಿದ್ದನು.

ಅವಳನ್ನು ನೋಡಿದ ತಪನನು ಆನಂದದಿಂದ ಮುಖವರಳಿಸಿದನು. ಮತ್ತು ವನ




ರಮೆಯ ಬಳಿಗೆ ಬಂದು "ವನರಮೆ! ನಿನಗೋಸ್ಕರವೇ ನಾನುಬಂದೆ. ಛಾಯಾದೇವಿಯನ್ನು ಬಿಟ್ಟುಬಂದೆ" ಎಂದನು.

ವನರಮೆ ಕೋಪದಿಂದ—"ಛೀ, ದುಷ್ಟ! ಮೋಸಗಾರ! ನನ್ನ ಸ್ನೇಹಿತೆಯಾದ ಛಾಯಾದೇವಿಗೆ ಮೋಸಮಾಡಿದಿಯಾ? ನನಗೂ ಅನ್ಯಾಯಮಾಡುವಿಯಾ? ಎಲ್ಲಿ? ನನ್ನ ವಸಂತನೆಲ್ಲಿ? ನೀನೇ ಅವನಿಗೆ ಏನೋ ಮೋಸಮಾಡಿದ್ದಿ! ಏನುಮಾಡಿದಿಯೋ ಹೇಳು" ಎಂದು ಗದರಿಸಿದಳು.

ತಪನನು ಬೆದರಿ—"ವನರಮೆ, ಕೋಪಿಸಬೇಡ. ವಸಂತನ ಸಂಗತಿ ನಿಜವಾಗಿಯೂ ನನಗೆ ಗೊತ್ತಿಲ್ಲ" ಎಂದಂದು ಅಲ್ಲಿ ನಿಲ್ಲದೆ ಹೊರಟು ಹೋದನು. ವಸಂತನನ್ನು ಹುಡುಕುತ್ತಾ ವನರಮೆಯೂ ಹೊರಟಳು.



ಈ ಸಂಭಾಷಣೆಗಳನ್ನೆಲ್ಲಾ, ಗಗನ ಮಾರ್ಗದಲ್ಲಿ ಹೋಗುತ್ತಿದ್ದ ಮನ್ಮಥನೂ ಕೇಳಿದನು. ಕೇಳಿ ತುಂಬಾ ತಳಮಳಪಟ್ಟನು. ಅನಿಲನು ಮಾಡಿದ ಪೊರಬಾಟಿನಿಂದ ಹೀಗಾಯಿತೆಂದು ಅರಿತನು. ಕೂಡಲೇ ಅವನು ಅನಿಲನನ್ನು ಕರೆದು ತಪನನನ್ನು ತೋರಿಸುತ್ತ "ಇವನ ರೆಪ್ಪೆಗಳಿಗೋ ನೀನು ಜೇನು ಹಚ್ಚಿದ್ದು?" ಎಂದು ಕೇಳಿದನು. "ಇವನಲ್ಲ. ಈ ಕುಮಾರಿ ಮಾತ್ರ ಅವಳೆ" ಎಂದನು ಅನಿಲ. "ಅರರೆ! ಅಂತೆಯೇ ಮೋಸವಾಯಿತು. ಸರಿ, ಆದುದಾಯಿತು. ನೀನು ಆ ತಪನನ ಹಿಂದೆಯೇ ಹೋಗಿ ಅವನು ನಿದ್ರೆ ಮಾಡುತ್ತಲೇ ಅವನ ರೆಪ್ಪೆಗಳಿಗೆ ಈ ಜೇನಿನ ಬಿಂದನ್ನು ಹಚ್ಚಿ ಬಾ. ಆ ಛಾಯಾದೇವಿ ಎಲ್ಲಿದ್ದಾಳೋ ಹುಡುಕಿ, ಇವನು ಏಳುವ ಸಮಯಕ್ಕೆ ಸರಿಯಾಗಿ, ಅವಳನ್ನು ಇವನ ಕಣ್ಣಮುಂದೆ ನಿಲ್ಲಿಸು" ಎಂದನು.

ಅನಿಲನು, ಮಾಡಿದ ತಪ್ಪನ್ನು ಸರಿಪಡಿಸಿ ಕೊಳ್ಳಲಿಕ್ಕಾಗಿ, ತಪನನನ್ನು ಅನುಸರಿಸಿ ಆಕಾಶಮಾರ್ಗದಿಂದ ಹೋದನು. ಸ್ವಲ್ಪ ದೂರ ಹೋದಮೇಲೆ ತಪನನು ಆಯಾಸ ಗೊಂಡು, ಒಂದುಕಡೆ ಮಲಗಿ ನಿದ್ದೆ ಮಾಡಿದನು. ಅನಿಲನು ಅವನ ರೆಪ್ಪೆಗಳಿಗೆ ಜೇನಿನ ಬಿಂದುಗಳನ್ನು ತಡವಿ, ಛಾಯಾದೇವಿ ಯನ್ನು ಹುಡುಕಿಕೊಂಡು ಬರಲಿಕ್ಕಾಗಿ ಹೊರಟನು.

ಮುಂದೆ ಸ್ವಲ್ಪಹೊತ್ತಿಗೆಲ್ಲಾ ಛಾಯಾದೇವಿ ಓಡುತ್ತಾ ಅಲ್ಲಿಗೆ ಬಂದಳು. ಅವಳ ಹಿಂದಿ ನಿಂದಲೇ ವಸಂತನೂ ಬಂದನು. ಆಗ ಛಾಯಾದೇವಿ—"ಅಯ್ಯೋ ನನ್ನನ್ನು ಈ ದುರ್ಮಾರ್ಗನ ಬಾಧೆಯಿಂದ ತಪ್ಪಿಸುವವರು ಯಾರೂ ಇಲ್ಲವೆ?' ಎಂದು ಗಟ್ಟಿಯಾಗಿ ಕೂಗಿದಳು.

ಈ ಗೋಳು ಕೇಳಿ ಮನ್ಮಥನೂ ಅನಿಲನೂ ಯಾರಿಗೂ ಕಾಣಿಸದಂತೆ ಅಲ್ಲಿಯೇ ಬಂದು ನಿಂತರು. ಆ ಕೂಗು ಕೇಳಿ ಪಕ್ಕದಲ್ಲಿಯೇ ಮಲಗಿದ್ದ ತಪನನಿಗೂ ಎಚ್ಚರಿಕೆಯಾಯಿತು. ಎಚ್ಚೆತ್ತಕೂಡಲೇ ಕಣ್ಣೆದಿರಿಗೆ ಛಾಯಾದೇವಿ ತೋರಿದಳು. ಕಣ್ಣಿಗೆಬಿದ್ದ ಆ ಜೇನಿನ ಪ್ರಭಾವ ದಿಂದ ತಪನನಿಗೆ ಛಾಯಾದೇವಿಯಮೇಲೆ ಪ್ರೇಮವುಂಟಾಯಿತು. ಬಹುಪ್ರೀತಿಯಿಂದ ಅವಳನ್ನು ಮಾತಾಡಿಸಿದನು.

ಛಾಯಾದೇವಿಗೆ ಅತ್ಯಾಶ್ಚರ್ಯವಾಯಿತು. ತನಗೆ ಮೋಸಮಾಡಿ ಓಡಿಹೋದ ತಪನನೇ ಹೀಗೆ ಮಾತಾಡುವುದೇ? ಎಂದುಕೊಂಡಳು. ಆಗ ವಸಂತನು—"ಛಾಯಾ! ನಿನ್ನನ್ನು ನಾನೇ ವರಿಸುವೆನಲ್ಲದೆ ಇವನಲ್ಲ; ಇವನನ್ನು ಹೋಗೆನ್ನು!" ಎಂದನು. ಇದೆಲ್ಲಾ ಒಂದು ವಿಚಿತ್ರ ನಾಟಕದಂತೆ ತೋರಿತು ಛಾಯೆಗೆ.

ಆಗ ಅಲ್ಲಿಗೆ ವನರಮೆ ಕೂಡಾ ಬಂದಳು. ಛಾಯಾದೇವಿಯನ್ನು ಕುರಿತು ವಸಂತನೂ ತಪನನೂ ವಾದಿಸುವುದನ್ನು ನೋಡಿ, ಛಾಯೆ ಬಹಳ ಕೆಟ್ಟವಳೆಂದು ಅವಳಿಗೆ ತೋರಿತು. ಛಾಯಾದೇವಿಯನ್ನು ಬಯ್ಯಲಾರಂಭಿಸಿದಳು. "ನಾನೇನೂ ಅರಿಯೆ!" ಎಂದು ಛಾಯಾದೇವಿ ಅಳತೊಡಗಿದಳು. ತಪನನೂ ವಸಂತನೂ ಒಬ್ಬರನ್ನೊಬ್ಬರು ಬಯ್ಯುತ್ತ, ಹೊಡೆದಾಡಿ ಕೊಳ್ಳಲು ದೊಣ್ಣೆತರಲು ಅತ್ತಿತ್ತ ಓಡಿದರು.

ಹೀಗೆ ಅವರು ನಿಷ್ಕಾರಣವಾಗಿ ತಲೆಮಂಡೆ ಒಡೆದುಕೊಳ್ಳುವಂತಾದುದನ್ನು ನೋಡಿ ಮನ್ಮಥನು ತನ್ನ ಮಾಯೆಯಿಂದ ಅವರಿಬ್ಬರ ಮಧ್ಯದಲ್ಲಿ ಒಂದು ಆಳವಾದ ನದಿ ಪ್ರವಹಿಸು ವಂತೆ ಮಾಡಿದನು. ಆ ನದಿಯ ಆಚೆ-ಈಚೆ ದಡಗಳಲ್ಲಿ ವಸಂತನೂ ತಪನನೂ ನಿಂತು ಕೊಂಡು ಒಬ್ಬರೊಬ್ಬರಮೇಲೆ ದೊಣ್ಣೆ, ಕೋಲು, ಕಲ್ಲುಗಳನ್ನು ಬೀಸಿದರು. ಅವೆಲ್ಲಾ ನದಿಯಲ್ಲೇ ಬಿದ್ದುವು. ಕಡೆಗೆ ಇಬ್ಬರೂ ದಣಿದು ಅಲ್ಲಲ್ಲೇ ಬಿದ್ದು ನಿದ್ದೆಹೋದರು. ಹಾಗೆಯೇ ಅತ್ತು ಅತ್ತು ಛಾಯಾದೇವಿಯೂ,




ಬಯ್ದು ಬಯ್ದು ವನರಮೆಯೂ ದಣಿದು ಮಲಗಿದರು.

ಆಗ ಮನ್ಮಥನು "ಅನಿಲಾ, ಈ ಛಾಯಾ ದೇವಿ ಏಳುವುದರೊಳಗೆ ಅವಳನ್ನೆತ್ತಿ ತಪನನ ಮುಂದೆ ಬಿಟ್ಟುಬಾ" ಎಂದನು. ಅನಿಲನು ಹಾಗೆಯೇ ಮಾಡಿ ಬಂದಮೇಲೆ, "ಇನ್ನು ಈ ವನರಮೆಯನ್ನು ಎತ್ತಿ ವಸಂತನ ಮುಂದೆ ಹಾಕಿಬಿಡು" ಎಂದು ಮನ್ಮಥನು ಪುನಃ ಕೆಲಸ ಹೇಳಿದನು. ನಿಮಿಷದೊಳಗೆ ಅದನ್ನೂ ನೆರವೇರಿಸಿ ಬಂದನು ಅನಿಲ.

ಆಗ ಮನ್ಮಥನು—"ಅನಿಲಾ, ನಮ್ಮ ಕೆಲಸ ಪೂರ್ತಿ ಮುಗಿದಿಲ್ಲ. ತಪನನೂ ಛಾಯೆಯೂ ಎದ್ದು ಒಬ್ಬರನ್ನೊಬ್ಬರು ನೋಡಿ ಕೊಂಡು ಸಂತೋಷಪಡುವರೇ ಹೊರತು, ಆಚೆಯ ದಡದಲ್ಲಿರುವ ವನರಮೆಯೂ ವಸಂ

ತನೂ ಎದ್ದು ಆನಂದಿಸಿಕೊಳ್ಳಲಾರರು. ಕಣ್ಣಿಗೆ ಬಿದ್ದ ಜೇನಿನ ಪ್ರಭಾವದಿಂದ ವಸಂತನು ಛಾಯೆಯ ಚಿಂತೆಯಲ್ಲೇ ಇದ್ದಾನು. ಇದಕ್ಕೇನು ಉಪಾಯ?" ಎಂದನು.

"ಉಪಾಯವಿದೆ" ಎಂದಂದು ಅನಿಲನು ಎಲ್ಲಿಗೋ ಹೋದನು. ಮನ್ಮಥನು ಆಶ್ಚರ್ಯದಿಂದ ನೋಡುತ್ತಿದ್ದಂತೆಯೇ ಅವನು ನಾಲ್ಕು ಎಲೆಗಳನ್ನು ತಂದನು. ಆ ಎಲೆಗಳನ್ನು ಜಜ್ಜಿ ರಸವನ್ನು ವಸಂತನ ರೆಪ್ಪೆಯ ಮೇಲೆ ಹಿಂಡಿದನು.

ಕೂಡಲೇ ಜೇನಿನ ಪ್ರಭಾವವು ಮಾಯವಾಗಿಹೋಗಿ, ವಸಂತನು ನಿದ್ರೆಯಿಂದೆದ್ದು ವನರಮೆಯನ್ನು ಮುಂಚಿನಂತೆಯೇ ಪ್ರೇಮಿಸಲಾರಂಭಿಸಿದನು. ಛಾಯಾ ತಪನರೂ ನಿದ್ರೆಯಿಂದೆದ್ದು ಪರಸ್ಪರ ಸ್ನೇಹದಿಂದ ಹೊರಟುಹೋದರು. ನಡೆದುದೆಲ್ಲಾ ಒಂದು ಸ್ವಪ್ನದಂತೆ ಅವರಿಗೆ ತೋರಿತು. ನಾಲ್ವರೂ ಸಂತೋಷವಾಗಿದ್ದರು.

ಆಮೇಲೆ ಮನ್ಮಥನು ನೇರಾಗಿ ರತೀದೇವಿಯ ಅಂತಃಪುರಕ್ಕೆ ಬಂದನು. ಅವಳು ಇನ್ನೂ ನಿದ್ರೆಮಾಡುತ್ತಿದ್ದಳು. ನಿದ್ರೆಯಲ್ಲಿ ಕೂಡಾ ಅವಳ ಕಣ್ಣಿನೊಳಗೆ ಕೋಪವು ಕಾಣುತ್ತಿತ್ತು!

ಮನ್ಮಥನು ಮೆಲ್ಲನೆ ಅವಳ ಎರಡು ಕಣ್ಣುಗಳ ರೆಪ್ಪೆಗಳಿಗೂ, ತಾನು ತಂದ ಜೇನಿನ ಬಿಂದುಗಳನ್ನು ಹಚ್ಚಿದನು. ಬಳಿಕ ಅವಳು ಏಳುವುದನ್ನೆ ನೋಡುತ್ತ ಅವಳ ಇದಿರಿನಲ್ಲಿಯೇ ಕುಳಿತನು.

ಸ್ವಲಹೊತ್ತಿನಲ್ಲಿ ರತೀದೇವಿ ಎದ್ದಳು. ಆಶ್ಚರ್ಯ! ಅವಳ ಕೋಪವೆಲ್ಲಾ ಎಲ್ಲಿಗೆ ಹೋಯಿತೋ ಏನೋ! ಪತಿಯನ್ನು ನೋಡಿ ಒಳ್ಳೆಪ್ರೀತಿಯಿಂದ "ಎಲ್ಲಿಗೆ ಹೋದಿರಿ? ಎಷ್ಟುಹೊತ್ತು ನಿಮಗಾಗಿ ಕಾದೆನು! ನನಗೆ ಕೋಪಬಂದರೆ ನೀವು ಹಾಗೆ ಹೋಗುವುದೆ? ಇನ್ನೆಂದೂ ಹಾಗೆ ಹೋಗುವುದಿಲ್ಲವೆಂದು ಆಣೆಮಾಡಿ" ಎಂದಳು ಮುಗುಳುನಗುತ್ತಾ.

ಮನ್ಮಥನೂ ನಗುತ್ತಾ—"ಇಲ್ಲ! ಇಲ್ಲ! ನೀನು ನಿದ್ದೆಮಾಡಿದ್ದು ನೋಡಿ ಎಬ್ಬಿಸಬಾರದೆಂತಲೇ ಸುಮ್ಮನಿದ್ದೆ. ಇನ್ನುಮೇಲೆ ನಿನಗೆ ಕೋಪವೇ ಬರಲಿಕ್ಕಿಲ್ಲ! ನನಗೂ ಸಿಟ್ಟು ಬಾರದು!" ಎಂದನು.

ಇಬ್ಬರೂ ಸಂತೊಷವಾಗಿದ್ದರು.






# ವೀರನಾಯಕ

ನಮ್ಮ ದೇಶವನ್ನು ಹಿಂದೆ ಕೊಂಚ ಕಾಲ ಮೊಗಲಬಾದಶಹರು ಆಳಿದಸಂಗತಿ ನಿಮಗೆ ಗೊತ್ತಿದೆಯಷ್ಟೆ? ಆ ಬಾದಶಹರಲ್ಲಿ ಔರಂಗಜೇಬನೂ ಒಬ್ಬ. ಅವನ ಪರಿಪಾಲನೆಯಲ್ಲಿ ಪ್ರಜೆಗಳು ಸುಖವಾಗಿರಲಿಲ್ಲ. ಆಡಳಿತ ಬಹಳ ಕ್ರೂರವಾಗಿದೆ, ಎಂದೇ ಪ್ರಜೆಗಳೆಲ್ಲ ಹೇಳಿಕೊಳ್ಳುತ್ತಿದ್ದರು. ಅವನು ಅನ್ಯಮತಗಳ ಮೇಲೆ ದ್ವೇಷವುಳ್ಳವನಾಗಿದ್ದ. ಮುಖ್ಯವಾಗಿ ಸಿಖ್ಖುಮತಸ್ಥರು ಔರಂಗಜೇಬನಿಂದ ನಾನಾ ಸಂಕಟಗಳನ್ನು ಅನುಭವಿಸುತ್ತಿದ್ದರು.

ಬಾದಶಹನು ಕೊಡುವ ಯಾತನೆಯಿಂದ ಪ್ರಜೆಗಳಲ್ಲೆಲ್ಲಾ ಬಹಳ ಭಯವೆದ್ದಿತ್ತು. ಸುಖವಾಗಿದ್ದೇವು ಎಂಬ ನಂಬುಗೆಯೇ ಇಲ್ಲದೆ ಹೋಯಿತು. ದಿನಹೋದಂತೆ ಪ್ರಜೆಗಳ ಕಷ್ಟನಷ್ಟಗಳು ಹೆಚ್ಚಿಕೊಂಡೇ ಬಂದುವು.

ಇಂತಹ ಇಕ್ಕಟ್ಟಿನ ಪರಿಸ್ಥಿತಿಯಲ್ಲಿ, ಗುರು ಗೋವಿಂದಸಿಂಗ್ ಎಂಬ ತರುಣನು ಸಿಖ್ಖ ಸಮುದಾಯಕ್ಕೆಲ್ಲಾ ನಾಯಕನಾಗಿದ್ದನು. ವಯಸ್ಸಿನಲ್ಲಿ ಚಿಕ್ಕವನಾದರೂ ಧೈರ್ಯದಲ್ಲಿಯೂ ಪರಾಕ್ರಮದಲ್ಲಿಯೂ ಬುದ್ಧಿಕುಶಲತೆಯಲ್ಲಿಯೂ ಅವನಿಗೆ ಸಮ ಅವನೇ. ಈ ಬಗೆಯ ತೇಜಸ್ವೀಗುಣಗಳೇ ಅವನನ್ನು ಸಿಖ್ಖನಾಯಕನನ್ನಾಗಿ ಮಾಡಿದುವು. ಅವನು ಬೆಂಕಿಗೆ ಹಾರೆಂದರೂ ಹಾರುವಷ್ಟು ನಂಬುಗೆ ಎಲ್ಲರಿಗೂ ಅವನ ಮೇಲಿತ್ತು.

ಅವನು ನಾಯಕನಾಗಿ ಸುಮ್ಮನೆ ಕುಳಿತು ಸುಖಪಡಲಿಲ್ಲ. ಪ್ರಜೆಗಳ ಸ್ಥಿತಿ, ದೇಶದ ಗತಿ ಹೇಗೆ ಹೇಗೆ ಉಂಟೆಂಬುದನ್ನು ಪರಿಶೀಲನೆ ಮಾಡತೊಡಗಿದನು. ಆಹಾ! ಎಂತಹ ದುಃಸ್ಥಿತಿ! ಮುಂದೆ ಬಂದು ಮೆರೆಯಬೇಕಾದ ಯುವಕರೆಲ್ಲಾ ಪೌರುಷಹೀನರಾಗಿ ಅಂಜುಗುಳಿಗಳಂತೆ ತಿರುಗುತ್ತಿರುವರೆಂದು ತೋರಿತು. ಆದುದರಿಂದ ಮೊದಲು ತನ್ನ ಪರಿವಾರವನ್ನು ಸರಿಗೊಳಿಸಿಬಿಟ್ಟರೆ, ತನ್ನಂತೆ ದೇಶವೂ ಸರಿಯಾದೀತೆಂದು ನಿಶ್ಚಯಿಸಿಕೊಂಡನು.

ಹೀಗೆ ನಿಶ್ಚಯಿಸಿ, ಒಂದುದಿನ, ರಾಜ್ಯದಲ್ಲಿರುವ ಪ್ರಜೆಗಳನ್ನೆಲ್ಲಾ ವಿಶಾಲವಾದೊಂದು ತೋಟಕ್ಕೆ ಬರಮಾಡಿಕೊಂಡನು. ನಾಯಕ ಗೋವಿಂದಸಿಂಹನ ಕರೆಯನ್ನು ಕೇಳಿ ಯಾವನು ತಾನೇ ಬಾರದಿರುವನು? ಎಲ್ಲರೂ

ಜಿ. ವಿ. ಹರನಾಥ, ಬೆಳಗಾವಿ



ಬಂದು ಆ ತೋಟದಲ್ಲಿ ಗುಮಿಗೂಡಿ, ನಾಯಕನು ಏನು ಹೇಳುವನೋ ಎಂದು ಕೇಳಲು ಕಿವಿ ನಿಗುರಿಸಿಕೊಂಡು ಕುಳಿತಿದ್ದರು.

ಆದರೆ ಅಲ್ಲಿ ಭಾಷಣ ಮಾಡಲಿಕ್ಕೆ ತಕ್ಕ ಏರ್ಪಾಡೇನೂ ಕಾಣಲಿಲ್ಲ. ನೋಡನೋಡುತ್ತಿದ್ದಂತೆ, ಬಾಗಿಲಿಗಿರುವ ತೆರೆಯನ್ನು ತೊಲಗಿಸಿಕೊಂಡು, ಕೈಯಲ್ಲಿ ಬಿಚ್ಚು ಕತ್ತಿಯನ್ನು ಝುಳಪಿಸುತ್ತ, ವೀರಾವೇಶದಿಂದ ಗುರುಗೋವಿಂದಸಿಂಗನು ಈಚೆಗೆ ಬಂದನು.

ಬಂದು, ಬಹು ಭೀಕರವಾದ ಮುಖಮುದ್ರೆಯಿಂದ, ಗಂಭೀರಧ್ವನಿಯಿಂದ—"ಬನ್ನಿವೀರರೆ! ಸ್ವಾತಂತ್ರ್ಯ ಪೀಠಕ್ಕೆ ಬಲಿಯಾಗಲು ಸ್ವೇಚ್ಛಾವೀರರು ನನಗೆಬೇಕು. ಯಾರು ಬರುವಿರೋ ಬನ್ನಿ!" ಎಂದು ಗರ್ಜಿಸಿದನು.

ಯುವಕರೆಲ್ಲಾ ಒಬ್ಬರನ್ನೊಬ್ಬರು ನೋಡಿಕೊಂಡರು. ಗುರುಗೋವಿಂದ ಸಿಂಗನ ಕೈಯಲ್ಲಿ ತಿರುಗುವ ಖಡ್ಗವನ್ನು ನೋಡಿದರು. ಮೆಲ್ಲನೆ ಒಬ್ಬೊಬ್ಬರೇ ಜಾರಲಾರಂಭಿಸಿದರು. ಭಯವು ಅವರ ನಂಬುಗೆಯನ್ನು ಒತ್ತುತ್ತಿತ್ತು.

ಒಬ್ಬನೇ ಒಬ್ಬನು ಧೈರ್ಯದಿಂದ ಮುಂದಡಿಯಿಟ್ಟು—"ನಾನು ಸಿದ್ಧನಿದ್ದೇನೆ" ಎಂದನು. ಅವನ ಹೆಸರು ಭಾಯಿಸಿಂಗ್. ಗೋವಿಂದಸಿಂಗನು ಅವನನ್ನು ಆಚೆಯ ಬದಿಯಲ್ಲಿದ್ದ ತನ್ನ ಡೇರೆಯೊಳಗೆ ಕರೆದೊಯ್ದನು. ಕೂಡಲೇಅಲ್ಲಿ ಒಬ್ಬ ಮನುಷ್ಯನನ್ನು ಕಡಿದುಹಾಕಿದ ಶಬ್ದವು ಕೇಳಿಬಂತು! ಒಡನೆಯೇ ನೆತ್ತರು ಸುರಿಯುವ ತನ್ನ ಖಡ್ಗದೊಂದಿಗೆ ಗುರುಗೋವಿಂದನು ಪುನಃ ಹೊರಗೆಬಂದು "ಇನ್ನೂ ಯಾರು ಬರುವಿರಿ?" ಎನ್ನುತ್ತಾ ಕತ್ತಿಯನ್ನು ಝುಳಪಿಸಿದನು.

"ನಾನು! ನಾನು!!—" ಎನ್ನುತ್ತಾ ಮತ್ತೆ ನಾಲ್ವರು ಮುಂದಕ್ಕೆ ಧಾವಿಸಿದರು. ಗುರುಗೋವಿಂದನು ಅವರನ್ನು ಕೂಡಾ ಒಳಕ್ಕೆ ಕರೆದೊಯ್ದನು. ಮತ್ತೆ ಈಗಲೂ ನಾಲ್ವರನ್ನೂ ತರಿದು ಹಾಕಿದ ಶಬ್ದವು ಕೇಳಿಬಂತು!!

ರಕ್ತವು ತೊಟ್ಟಿಕ್ಕುವ ಖಡ್ಗದೊಂದಿಗೆ ಮತ್ತೂ ಹೊರಗೆಬಂದನು ಗುರುಗೋವಿಂದಸಿಂಗು. ತ್ಯಾಗವೀರರಿಗೆ ಮೂತ್ತು ಆಹ್ವಾನವಿತ್ತನು. ಆಶ್ಚರ್ಯ! ಅಲ್ಲಿ ಸಮಾವೇಶಿತರಾದ ಯುವಕರೆಲ್ಲಾ ಆವೇಶಗೊಂಡು, ಅವನ

ಆಹ್ವಾನಕ್ಕೆ ಸಿದ್ಧರಾಗಿ ಮುಂದಕ್ಕೆ ನಡೆದರು. "ನಮ್ಮ ನಾಯಕನು ವೀರಯಜ್ಞ ಮಾಡುತ್ತಾನೆ. ವೀರರೇ ಬನ್ನಿರಿ!" ಎಂಬ ಶಬ್ದ ಮಾರ್ಮೊಳಗತೊಡಗಿತು. ಹೆದರಿ ಓಡಿದವರು ಕೂಡಾ ಹಿಂದಿರುಗಿ ಬಂದರು. ಭಯ ಓಡಿ ಹೋಯಿತು. ವಿಶ್ವಾಸ ಅಚಲವಾಯಿತು.

ಗುರುಗೋವಿಂದಸಿಂಹನು ಕಿರುನಗು ನಗುತ್ತ, ಹೊರಗೆಬಂದು ಎಲ್ಲರಿಗೂ ನಡುವೇ ನಿಂತುಕೊಂಡನು. ಈ ಮೊದಲು ಒಳಗೆ ಹೋಗಿದ್ದ ಸ್ವಚ್ಛಂದ ವೀರರೈವರೂ ಹೊರಗೆ ಬಂದು ಸಾಲಾಗಿನಿಂತರು! ಅದನ್ನು ನೋಡಿ ಎಲ್ಲರಿಗೂ ಆಶ್ಚರ್ಯವೂ ಗೋವಿಂದ ಸಿಂಹನ ಮೇಲೆ ಇನ್ನಷ್ಟು ನಂಬುಗೆಯೂ ಉಂಟಾಯಿತು!

ಜಯ ಜಯಾಕಾರದ ನಡುವೆ ಗುರು ಗೋವಿಂದಸಿಂಗನು ಗಂಭೀರವಾಣಿಯಿಂದ– "ಆಹಾ! ನಮ್ಮಲ್ಲಿರುವ ಪೌರುಷವು ಏನೂ ಕುಂದಿಹೋಗಿಲ್ಲವೆಂಬುದನ್ನು ಮೊದಲು ಈ ಐವರು ಶೂರರು ರುಜುಗೊಳಿಸಿದರು. ಇವರೇ ಶ್ರೇಷ್ಠರತ್ನದಂತಹ ನನ್ನ ಪ್ರಿಯಶಿಷ್ಯರು! ಶತ್ರುಗಳ ಹಿಂಸಾಮಯ ಆಳಿಕೆಯಿಂದ, ಸರಿಯಾದ ನಾಯಕರಿಲ್ಲದೆ, ನಮ್ಮ ಪೌರುಷವು ಅಡಗಿಹೋಯಿತು. ಶತ್ರುಗಳು ನಮ್ಮನ್ನು ತುಳಿಯತೊಡಗಿದರು. ಈಗ ಈ ಐವರನ್ನು ಬೆಂಬತ್ತಿಬಂದ ನಿಮ್ಮಂತಹ ತ್ಯಾಗಶ್ರೇಷ್ಠರು, ವೀರರತ್ನಗಳು ನಮ್ಮಲ್ಲಿರುವಾಗ ಇನ್ನು ಭಯವೇಕೆ? ನಿಮಿಷದಲ್ಲಿ ಶತ್ರುಗಳನ್ನು ಅಡಗಿಸಬಹುದು. ಏಳಿರಿ! ಪೂರ್ಣ ಶತ್ರುಸಂಹಾರ



ವಾಗಿ ನೆಮ್ಮದಿಬರುವವರೆಗೂ ನಾನು ಈ ಖಡ್ಗವನ್ನು ಒರೆಗಿಳಿಸುವುದಿಲ್ಲ!" ಎಂದು ಉತ್ತೇಜನಕರವಾಗಿ ಹೇಳಿದನು. ಎಲ್ಲರೂ ಮಹಾವೀರರಾಗಿ ಮಾರ್ಪಟ್ಟರು.

ಗುರುಗೋವಿಂದನು ಡೇರೆಯನ್ನು ಬಿಚ್ಚಿಸಿ ಹಾಕಿದನು. ಜನರಲ್ಲಿ ಪೌರುಷವನ್ನು ಉಕ್ಕಿಸಲು, ನಾಯಕನುಮಾಡಿದ ವಿಚಿತ್ರ ಕೃತ್ಯವನ್ನು ಈಗ ಎಲ್ಲರೂ ನೋಡಿದರು. ರುಂಡ ಕಡಿದ ಐದು ಟಗರುಗಳು ಅಲ್ಲಿ ಸತ್ತು ಬಿದ್ದಿದ್ದುವು! ಶತ್ರುಗಳನ್ನು ಹೀಗೆ ಕಡಿಯಬೇಕೆಂದು ತೋರಿಸಿದ ಆ ಟಗುರುಗಳಿಂದಲೇ ಅಂದು ಎಲ್ಲರಿಗೂ ದೊಡ್ಡ ಔತಣವಾಯಿತು!

ಹೀಗೆ ಗುರುಗೋವಿಂದಸಿಂಗನಿಗೆ ಪ್ರಿಯ ಶಿಷ್ಯರಾದ ಆ ಐವರಿಗೆ "ಪಾಂಚ್ ಪ್ಯಾರೆ" ಎಂದು ಹೆಸರಾಯಿತು.




ಪೂರ್ವಕಾಲದಲ್ಲಿ ಕಾಂಚನಪುರವೆಂಬ ರಾಜ್ಯವನ್ನು ಕಾಲಕೇತು ಎಂಬ ರಾಜನು ಪಾಲಿಸುತ್ತಿದ್ದನು. ಆತನು ಬಹಳ ಗರ್ವಿ. ತಾನೇ ಸರ್ವಶಕ್ತನೆಂದು ಭಾವಿಸಿಕೊಂಡಿದ್ದನು. ದೇವರನ್ನೇ ನಂಬದ ದುರಹಂಕಾರಿ.

"ಐಶ್ವರ್ಯ, ಅಧಿಕಾರ ಇದೆಲ್ಲಾ ಸ್ಥಿರವೆಂದು ನಂಬಬಾರದು. ದುರಹಂಕಾರ ಪಡಬಾರದು" ಎಂದು ಆತನ ಕ್ಷೇಮಚಿಂತಕರಾದ ಗುರುಹಿರಿಯರು ಎಷ್ಟೋ ಹೇಳಿನೋಡಿದರು. ಅಧಿಕಾರದ ಗರ್ವದಿಂದ ಉಬ್ಬಿಹೋದ ಅವನ ಕಿವಿಗಳಿಗೆ ಅದಾವುದೂ ಏರಲಿಲ್ಲ. ಚಿಕ್ಕವರು ದೊಡ್ಡವರೆಂಬ ತಾರತಮ್ಯವಿಲ್ಲದೆ ಎಲ್ಲರನ್ನೂ ತೃಣೀಕರಿಸುತ್ತಿದ್ದ. ತನ್ನನ್ನು ರಾಜಪದವಿಯಿಂದ ತಪ್ಪಿಸಲಿಕ್ಕೆ ಯಾರಿಂದಲೂ ಸಾಧ್ಯವಿಲ್ಲವೆಂದು ಆತನ ನಂಬುಗೆ. ದಿನಹೋದಂತೆ ಆತನ ಅಹಂಕಾರವು ಏರಿಕೊಂಡೇ ಹೋಗುತ್ತಿತ್ತು. ಹೀಗಿರಲು,

ಕಾಂಚನಪುರ ರಾಜಧಾನಿಯಲ್ಲಿ ಪ್ರಸಿದ್ಧವಾದೊಂದು ದೇವಾಲಯವಿತ್ತು. ಆ ದೇವಾಲಯದಲ್ಲಿ ಪ್ರತಿವರ್ಷವೂ ಬಹುವೈಭವದಿಂದ ಉತ್ಸವಗಳು ಜರುಗುತ್ತಿದ್ದುವು. ಆಗ ದೊಡ್ಡ ದೊಡ್ಡ ಸಮಾರಾಧನೆಗಳೂ ನಡೆಯುತ್ತಿದ್ದುವು. ತನ್ನ ಹೆಸರಿನಲ್ಲಿಯೇ ಆ ಉತ್ಸವಗಳೂ ಸಮಾರಾಧನೆಗಳೂ ನಡೆಯುವುದೆಂದು ಕಾಲಕೇತು ನಂಬಿದ್ದ.

ಒಮ್ಮೆ ಕಾಲಕೇತು ಆ ಉತ್ಸವವನ್ನು ನೋಡಬೇಕೆಂದು, ಮಂತ್ರಿಗಳು, ಸಾಮಂತರು, ವಂದಿ ಮಾಗಧರು ಮೊದಲಾದ ಸಮಸ್ತ ಪರಿವಾರದೊಂದಿಗೆ ಹೊರಟನು.

ಅವನು ಅಲ್ಲಿಗೆ ಹೋದಾಗ ದೇವಾಲಯದ ಮಂಟಪದಲ್ಲಿ ಪಂಡಿತರು ಪುರಾಣಪಠನೆ ಮಾಡುತ್ತಿದ್ದರು. ಪುರೋಹಿತರು ಸ್ವರಯುಕ್ತವಾಗಿ ಮಂತ್ರಗಳನ್ನು ಹೇಳುತ್ತಿದ್ದರು. ರಾಜನು ಬಂದಾಗ ಪುರೋಹಿತರು ಹೇಳುತ್ತಿದ್ದ ಶ್ಲೋಕಕ್ಕೆ ಹೀಗೆ ಅರ್ಥವಿತ್ತು:

"ದೇವೋತ್ತಮ! ನೀನೇ ಸರ್ವಶಕ್ತನಾಗಿರುತ್ತಿ. ನೀನು ಸಂಕಲ್ಪಿಸಿದ ಮಾತ್ರಕ್ಕೇ ಮಹಾಪ್ರಭುಗಳನ್ನು ಸೇವಕರಾಗಿಯೂ, ಸೇವಕರನ್ನು ಮಹಾಪ್ರಭುಗಳಾಗಿಯೂ ಮಾಡಬಲ್ಲೆ!"

ಬಿ. ಕೇಶವರಾವ್, ಪಾಣೆಮಂಗಳೂರು

ಈ ಶ್ಲೋಕವನ್ನು ಕೇಳಿದಾಗ ಕಾಲಕೇತು ವಿಗೆ ತುಂಬಾ ಸಿಟ್ಟು ಬಂತು. ಹುಬ್ಬುಗಂಟು ಬಿತ್ತು. ಅಹಂಕಾರದಿಂದ ತನ್ನೊಳಗೆ ತಾನೇ– "ದೇವರಂತೆ, ಸಂಕಲ್ಪಮಾತ್ರದಿಂದ ರಾಜ ನನ್ನು ಸೇವಕನನ್ನಾಗಿಯೂ, ಸೇವಕನನ್ನು ರಾಜನನ್ನಾಗಿಯೂ ಮಾರ್ಪಡಿಸುವನಂತೆ! ಎಂತಹ ಮಂತ್ರ! ಮುಟ್ಠಾಳಪಂಡಿತರ ಅರ್ಥ ವಿಲ್ಲದ ಮಂತ್ರ" ಎಂದು ಮೂದಲಿಸಿಕೊಂಡನು.

ಆದರೂ ಇದೊಂದು ದೊಡ್ಡ ಹೋಯ್ದಾಟ ವಾಗಿ ಅವನ ಹೃದಯದೊಳಗೇ ಮಥನವಾಗು ತ್ತಿತ್ತು. ಬಾಯಿಬಿಟ್ಟು ಹೇಳಲು ಅದು ತಕ್ಕ ಸ್ಥಳವಾಗಿರಲಿಲ್ಲ. ಶ್ಲೋಕಾದಿಗಳನ್ನೆಲ್ಲ ಮಾರ್ಪಡಿಸುವ ಶಾಸನ ಮಾಡಬೇಕೆಂದು ಯೋಚನೆಮಾಡಿದನು. ಅಷ್ಟರಲ್ಲಿ ಅವನಿ ಗೊಂದು ಮಯಕವು ಬಂದಿತು. ಆಕಳಿಸಿ ಕಣ್ಣುಮುಚ್ಚಿದನು. ಆ ಬವಳಿಕೆ ಹೋಗಿ ಕಣ್ಣು ತೆರೆದನು. ಸುತ್ತುಮುತ್ತೂ ಕಗ್ಗತ್ತಲೆ! ತನ್ನೊಂದಿಗಿರುವ ಮಂತ್ರಿ ಸಾಮಂತರಿಲ್ಲ; ವಂದಿಮಾಗಧರಿಲ್ಲ; ಪರಿವಾರವಿಲ್ಲ; ಯಾರೂ ಇಲ್ಲ. ಒಂದು ಸಣ್ಣ ದೀಪಕೂಡ ಸಮೀಪ ದಲ್ಲಿ ಕಾಣುವುದಿಲ್ಲ.

ಬಹಳ ಗಾಬರಿಯಾಯಿತು ಕಾಲಕೇತು ವಿಗೆ. ಭಯದಿಂದ ಮೈಯೆಲ್ಲಾ ಬೆವರಿತು; ಗಂಟಲು ಒಣಗಿತು ಆ ಕತ್ತಲೆಯಲ್ಲಿಯೇ ತಡವರಿಸುತ್ತಾ ಹೋಗಿ, ಹೇಗೋ ಬಾಗಿ ಲಿರುವ ಜಾಗವನ್ನು ತಿಳಿದುಕೊಂಡನು. ದಬ ದಬನೆ ಬಾಗಿಲನ್ನು ಬಡೆಯುತ್ತಾ "ಯಾರಲ್ಲಿ?



ತೆಗೆ ಬಾಗಿಲು! ನಾನು ರಾಜ! ಕಾಲಕೇತು ಮಹಾರಾಜ ನಾನು!! ಬೇಗ ಬಾಗಿಲು ತೆರೆಯಿರಿ!!!" ಎಂದು ಎಲ್ಲೆಲ್ಲಿಯೂ ಸೆಲೆಕೊಡುವ ಹಾಗೆ ಗಟ್ಟಿಯಾಗಿ ಅರಚಿದನು.

ಈ ಶಬ್ದ ದೇವಾಲಯದೊಳಗಿಂದ ಬರು ತ್ತಿತ್ತು. ದೇವಾಲಯದ ಆಚೆಗೆ ಕಾವಲಿರುವ ವರು, ಈ ಶಬ್ದವನ್ನು ಕೇಳಿ ಆಶ್ಚರ್ಯ ಪಡುತ್ತ—"ಈಗಲ್ಲವೇ ನಮ್ಮ ಪ್ರಭುಗಳು ಪೂಜಾ ನಮಸ್ಕಾರಗಳನ್ನು ಮುಗಿಸಿಕೊಂಡು ಹೋದದ್ದು? ಅವರು ಹೋಗುವುದನ್ನು ಕಣ್ಣಾರೆ ಕಂಡೆನಲ್ಲ? ಇದೇನು? ನಾನು ರಾಜ, ಕಾಲಕೇತು ಮಹಾರಾಜ! ಎಂದು ಕೂಗುವುದಾರು? ಯಾರಾದರೂ ಹುಚ್ಚನೊ? ಕುಡುಕನೊ?" ಎಂದು ಅವರವರೊಳಗೆ ತರ್ಕಿಸಿಕೊಳ್ಳುತ್ತಿದ್ದರು.



'ನೋಡೋಣ'ವೆಂದು ಕಡೆಗೆ ಕಾವಲುಗಾರರು ಬಾಗಿಲು ತೆರೆದರು. ಕಾಲಕೇತು ತತ್‌ಕ್ಷಣವೇ ಓಡಿದನು. ಕಾವಲಿಗರು ಆಶ್ಚರ್ಯದಿಂದ ಸ್ತಂಭಿಸಿ ನಿಂತರು.

ಕಾಲಕೇತು ರಾಜಭವನಕ್ಕೆ ಓಡಿಬಂದು– "ಯಾರಲ್ಲಿ? ನಾನು ದೇವಾಲಯದಲ್ಲಿ ನಿದ್ರೆ ಮಾಡುತ್ತಿದ್ದರೆ, ನನ್ನನ್ನು ಬಿಟ್ಟು ಮಂತ್ರಿ ಸಾಮಂತರೂ, ವಂದಿ ಮಾಗಧರೂ ಎಲ್ಲಾ ಹೇಗೆ ಬಂದಿರಿ? ಯಾರೋ ಅಲ್ಲಿ? ಈ ಅವಿಧೇಯರನ್ನೆಲ್ಲಾ ಹಿಡಿದು ಬಂಧಿಸಿರಿ" ಎಂದು ಆಜ್ಞೆ ಮಾಡಲಾರಂಭಿಸಿದನು.

"ಬಂಧಿಸಿರಿ ಅವನನ್ನು! ಹುಚ್ಚ! ಇವನು ಈ ರಾಜಭವನದೊಳಗೆ ಹೇಗೆ ಹೊಕ್ಕ?" ಎಂದು ಸೇನಾನಾಯಕನು ವೀರಭಟರಿಗೆ ಆಜ್ಞಾಪಿಸಿದನು. ಮರುಕ್ಷಣವೇ ಕಾಲಕೇತುವಿನ ಕೈಕಾಲುಗಳಿಗೆ ಸಂಕಲೆಗಳನ್ನು ತೊಡಿಸಿ ಮಹಾರಾಜನ ಇದಿರಿನಲ್ಲಿ ನಿಲ್ಲಿಸಿದರು.

ಕಾಲಕೇತುವಿನ ರೂಪದಲ್ಲಿದ್ದ ಆ ದೇವದೂತ, ಕಾಲಕೇತುವನ್ನು ನೋಡಿ ಮಂದಹಾಸದಿಂದ—"ಯಾರು ನೀನು?" ಎಂದು ಪ್ರಶ್ನಿಸಿದನು.

"ನಾನು! ನಾನು! ಹುಂ! ನಾನೇ ಕಾಲಕೇತು ಮಹಾರಾಜ!" ಎಂದು ಕಾಲಕೇತು ಭಟರ ಕಡೆಗೆ ತಿರುಗಿ—"ಈತನು ಮೋಸಗಾರ. ನನ್ನ ವೇಷವನ್ನು ಧರಿಸಿ ಗದ್ದುಗೆ ಏರಿದ್ದಾನೆ. ಇವನನ್ನು ಬಂಧಿಸಿರಿ" ಎಂದನು.

ಕಾಲಕೇತುವಾಗಿ ಕುಳಿತಿದ್ದ ದೇವದೂತನಿಗೆ, ಇನ್ನೂ ಅವನು ಅಹಂಕಾರದಲ್ಲಿರುವುದನ್ನು ನೋಡಿ ನಗು ಬಂತು.—"ಇವನಾರೋ ಕುಡುಕ. ಆದರೂ ಕೊಂಚ ತಿಳುವಳಿಕೆಯವನಾಗಿಯೂ ಇದ್ದಾನೆ. ನಮ್ಮ ಆಸ್ಥಾನದಲ್ಲಿ ಹಾಸ್ಯಗಾರನನ್ನಾಗಿ ಇಟ್ಟುಕೊಳ್ಳಬಹುದೋ ನೋಡುವ. ಇವನಿಗೆ ಸರಿಯಾಗಿ ಪ್ರಜ್ಞೆ ಬರುವವರೆಗೆ ಕಾರಾಗೃಹದಲ್ಲಿ ಹಾಕಿರಿ" ಎಂದು ಆಣತಿ ಕೊಟ್ಟನು.

ಕೂಡಲೇ ಸೇವಕರು ಅವನನ್ನು ಎಳೆದುಕೊಂಡು ಹೋಗಿ ಒಂದು ಕತ್ತಲೆಯ ಕೋಣೆಯೊಳಗೆ ಬಂಧಿಸಿಹಾಕಿದರು. ಅಲ್ಲಿ ಅವನು ಆಗಾಗ "ಆಹಾ! ನಾನಾರು ಗೊತ್ತೇ? ಕಾಲಕೇತು ಮಹಾರಾಜನು!" ಎಂದು ಕೂಗುತ್ತಿದ್ದನು. ಯಾರೂ ಲಕ್ಷ್ಯ ಮಾಡಲಿಲ್ಲ.

ಕಾವಲುಗಾರರು ಇವನೊಬ್ಬ ಹುಚ್ಚನೆಂದು ಗಹಗಹಿಸಿ ನಕ್ಕರು.

ಕೆಲವು ದಿನಗಳ ಮೇಲೆ ಆ ದೇವದೂತನು ರಾಜಭವನದಲ್ಲಿ ದೊಡ್ಡದೊಂದು ಔತಣವನ್ನು ಏರ್ಪಡಿಸಿದನು. ಆ ಔತಣಗಳಿಗೆ ದೇಶ ವಿದೇಶಗಳ ಅಧಿಪತಿಗಳೆಲ್ಲಾ ಬಂದಿದ್ದರು. ಬಹುದೊಡ್ಡ 'ದರ್ಬಾರು' ಜರುಗಿತು.

ಈ ದರ್ಬಾರಿಗೆ, ಕಾರಾಗೃಹದಲ್ಲಿರುವ ಕಾಲಕೇತುವನ್ನೂ ದೇವದೂತನು ಬರಮಾಡಿದನು. ಪಾಪ, ಅವನ ಅವಸ್ಥೆ ಏನು ಹೇಳುವುದು? ಬಗೆಬಗೆಯ ಬಣ್ಣದ ಚಿಂದಿಚೂರುಗಳನ್ನು ಹೊಲಿದ ಉಡುಪನ್ನು ತೊಟ್ಟಿದ್ದ. ಮೈ ಸೊರಗಿ ಹೋಗಿತ್ತು. ತಲೆಗೂದಲು ಒಣ ಹುಲ್ಲಿನಂತೆ ಹಾರುತ್ತಿದ್ದುವು. ಅದರ ಮೇಲೆ ತಲೆಯಲ್ಲೊಂದು ಕುಚ್ಚುಟೋಪಿ. ಎಲ್ಲರೂ ಅವನನ್ನು ನೋಡಿ ನಗುತ್ತಿದ್ದರು. ಅಷ್ಟರಲ್ಲಿ ಸಭಾಂಗಣದ ಮೂಲೆಯಲ್ಲಿದ್ದೊಂದು ಕೋತಿಗೂ ತಮಾಷೆತೋರಿ, ಓಡಿಬಂದು ಅವನ ಭುಜದಮೇಲೇರಿ ಕೊಂಡಿತು. ಎಲ್ಲರೂ ನಕ್ಕರು.

ದೇವದೂತನು ಬಂದವರಿಗೆಲ್ಲಾ ಅವನನ್ನು ತೋರಿಸಿ—"ಇವನು ಯಾರೆಂದು ನಿಮಗೆ ಗೊತ್ತೊ?" ಎಂದು ಕೇಳಿದನು.

ಅದನ್ನು ಕೇಳಿ ಕಾಲಕೇತು ಹಲ್ಲುಕಡಿಯುತ್ತ—"ಅಯ್ಯೊ, ನೀವಾರೂ ನನ್ನನ್ನು ಗುರ್ತಿಸಲಿಲ್ಲವೆ? ನಾನೇ ನಿಜವಾದ ಕಾಲಕೇತು. ಇವನಾರೋ ದೊಡ್ಡ ಕಳ್ಳ. ನನ್ನ ವೇಷದಿಂದ ಬಂದು, ಈ ಮಾಯಾನಾಟಕ



ವಾಡುತ್ತಿದ್ದಾನೆ" ಎಂದು ಹೇಳಿಕೊಂಡನು. ಇದನ್ನು ಕೇಳಿ ಎಲ್ಲರೂ ನಗುತ್ತ—"ಇವನಾರೋ ತಲೆತಿರುಗಿದ ಹುಚ್ಚನೇಸರಿ!" ಎಂದು ತೀರ್ಮಾನಿಸಿ ಗೇಲಿ ಮಾಡಿ ಬಿಟ್ಟರು. ಕಾಲಕೇತು ನಿರಾಶನಾದನು.

ಮತ್ತೆ ಕೆಲವು ದಿನಗಳ ಮೇಲೆ, ರಾಜನ ರೂಪದಲ್ಲಿದ್ದ ದೇವದೂತನು ಕಾಲಕೇತುವನ್ನು ಅಂತಃಪುರಕ್ಕೆ ಕರೆಯಿಸಿ—"ಈಗ ನೀನು ಯಾರೆಂದು ತಿಳಿಯಿತೆ? ಸರಿಯಾಗಿ ಹೇಳಬಲ್ಲೆಯಾ?" ಎಂದು ಕೇಳಿದನು.

ಕಾಲಕೇತು ಸ್ವಲ್ಪಹೊತ್ತು ಪಿಳಿಪಿಳಿ ನೋಡಿ, ಯೋಚನೆಗೆ ಬಿದ್ದು ಬಳಿಕ "ಹಾ! ನಾನೆ? ನಾನು! ಹೌದು. ನಿಜವಾಗಿಯೂ ನಾನು ಹುಚ್ಚ! ದೈವಬಲವನ್ನು ಧಿಕ್ಕಾರ ಮಾಡಿದ ಮಹಾ ಗರ್ವಿ. ದುರಹಂಕಾರಿ.

ಬುದ್ಧಿಹೀನ. ದೈವಸಹಾಯವಿಲ್ಲದೆ ನನ್ನ ಪ್ರಜೆಗಳೇ ನನ್ನನ್ನು ಗುರ್ತಿಸುವುದಿಲ್ಲವೆಂದು ಈಗ ನನಗೆ ತಿಳಿಯಿತು ಕಣ್ಣು ತೆರೆಯಿತು. ಗರ್ವಹೋಯಿತು. ಅಹಂಕಾರವಳಿಯಿತು. ನಾನೀಗ ದೀನ ಪ್ರಜೆಗಳಿಗೆ ದಾಸ" ಎನ್ನುತ್ತಾ ಬಳಬಳನೆ ಅಳಲಾರಂಭಿಸಿದನು.

ಆಗ ದೇವದೂತನು ತೃಪ್ತಿಯಿಂದ ತಲೆಯಾಡಿಸುತ್ತಾ,—"ಆಹಾ! ಈಗ ನಿಜವಾಗಿ ನಿನ್ನ ಗರ್ವಾಹಂಕಾರಗಳು ನಾಶವಾದುವು. ನಿಜವಾಗಿ ಈಗ ನೀನು ರಾಜನೇ! ಮಹಾರಾಜನೇ! ಕಾಲಕೇತುವೇ!" ಎಂದು ಹರಸಿದನು.

ನೋಡುತ್ತಿದ್ದಹಾಗೆಯೆ! ದೇವದೂತನು ಮಾಯವಾಗಿ ಹೋದನು. ಆತನು ಧರಿಸಿದ ರಾಜೋಚಿತ ಭೂಷಣಗಳೆಲ್ಲಾ ಕಾಲಕೇತುವನ್ನು ಅಲಂಕರಿಸಿಬಿಟ್ಟುವು. ತಲೆಯಮೇಲೆ ನವರತ್ನಖಚಿತವಾದ ಕಿರೀಟವು ಕಂಗೊಳಿಸಿತು. ಎಲ್ಲರೂ ಅವನನ್ನು ಮರ್ಯಾದೆಯಿಂದ ಸೇವಿಸತೊಡಗಿದರು. ಕಾಲಕೇತು ಬಹಳ ಆಶ್ಚರ್ಯ ಪಡುತ್ತ, ದೇವರನ್ನು ಮನಸಾ ವಂದಿಸಿದನು.

ದೇವದೂತನ ಮಾಯೆಯಿಂದ ಈ ಬಗೆಯ ವ್ಯತ್ಯಾಸಗಳು ಯಾರಿಗೂ ಗೊತ್ತಾಗಲೇ ಇಲ್ಲ. ಅಂದಿನಿಂದ ರಾಜನು ಸ್ವಭಾವದಲ್ಲಿ ತುಂಬಾ ಮಾರ್ಪಾಟು ಹೊಂದಿದ್ದು ನೋಡಿ ಅಧಿಕಾರಿಗಳಿಗೂ ಪ್ರಜೆಗಳಿಗೂ ತುಂಬಾ ಆಶ್ಚರ್ಯ! ಈಗ ಮಹಾರಾಜನು ಎಷ್ಟು ಒಳ್ಳೆಯವನಾಗಿ ಬಿಟ್ಟಿದ್ದಾನೆ! ಗುರುಹಿರಿಯರನ್ನು ಎಷ್ಟು ಗೌರವದಿಂದ ಕಾಣುತ್ತಾನೆ! ಎಲ್ಲಕ್ಕೂಮಿಂಚಿ ದೇವರಮೇಲೆ ಅವನಿಗೆ ಎಷ್ಟು ಭಕ್ತಿ! ಎಷ್ಟು ವಿಶ್ವಾಸ!

ಕಾಲಕೇತುಮಹಾರಾಜನು ರಾಜ್ಯದೊಳಗಿನ ದೇವಾಲಯಗಳನ್ನೆಲ್ಲಾ ಜೀರ್ಣೋದ್ಧಾರ ಮಾಡಿಸಲಾರಂಭಿಸಿದನು. ದೇವಾಲಯಗಳಲ್ಲಿ ಇನ್ನೂ ದೊಡ್ಡ ಉತ್ಸವಗಳಿಗೆ ಏರ್ಪಾಡು ಮಾಡಿದನು. ಈಗ ದೇವರ ಸ್ತೋತ್ರಗಳೂ ಮಂತ್ರಗಳೂ ರಾಜನಿಗೆ ಆತ್ಮಾನಂದವನ್ನು ಹುಟ್ಟಿಸುತ್ತಿದ್ದುವು. ದೈವಶಕ್ತಿಗೆ ಜಯ ಜಯವೆಂದು ಹೃದಯತುಂಬಿ ಹೇಳಿಕೊಂಡನು. ಬರುಬರುತ್ತಾ ಕಾಲಕೇತು ಪ್ರಜಾರಂಜಕ ರಾಜನೆಂದು ಬಹಳ ಖ್ಯಾತನಾದನು.






"ಲೋಕದಲ್ಲಿ ಯಾರು ಮೇಲು? ನೀನೋ ನಾನೊ?" ಎಂದು ಒಬ್ಬ ವೇದಾಂತಿಗೂ ಒಬ್ಬ ರೈತನಿಗೂ ಒಮ್ಮೆ ಚರ್ಚೆಯುಂಟಾಯಿತು "ಯಾವಾಗ ನೋಡಿದರೂ ಮಣ್ಣು ಅಗೆಯುವುದು, ಉಳುವುದು ಹೀಗೆ ಕೆಸರಿನಲ್ಲಿಯೇ ನಿನ್ನ ಕೆಲಸ. ಕೆಸರು ತಳಿದು ತುಳಿದು ನಿನ್ನ ಮನಸ್ಸೆಲ್ಲಾ ಕೆಸರಿನ ಹಾಗಾಗಿದೆ. ಆ ಮರಕ್ಕೂ ನಿನಗೂ ಏನೇನೂ ವ್ಯತ್ಯಾಸವಿಲ್ಲ" ಎಂದನು ವೇದಾಂತಿ.

ಅವನ ಮಾತನ್ನು ಕೇಳಿ ಮುಗುಳುನಗೆ ನಗುತ್ತಾ ರೈತನು–"ಅಯ್ಯಾ ವೇದಾಂತಿಗಳೆ! ಸಮಾಜಕ್ಕೆ ನಿಮಗಿಂತಲೂ ಹೆಚ್ಚಿಗೆ ಉಪಕಾರಿಯಾದವನು ನಾನೇ ಎಂಬುದು ಇನ್ನೂ ನಿಮಗೆ ಗೊತ್ತಿಲ್ಲ. ನೀವು ಬೋಧಿಸುವ ವೇದಾಂತವು ಇಲ್ಲದೆ ಹೋದರೂ ಲೋಕದಲ್ಲಿ ಎಲ್ಲರೂ ಜೀವಿಸಿಕೊಂಡಿದ್ದಾರು. ನಾವು ಕೆಸರು ತುಳಿದು ಬೇಸಾಯ ಮಾಡದಿದ್ದರೆ ನೀವೆಲ್ಲಾ ಒಂದು ನಿಮಿಷ ಕೂಡಾ ಬದುಕಿರಲಿಕ್ಕಿಲ್ಲ. ಯೋಚನೆ ಮಾಡಿ ನೋಡಿ" ಎಂದನು.

ವೇದಾಂತಿ ಯೋಚನೆಯಲ್ಲಿ ಬಿದ್ದನು.

ಆಗ ರೈತನು "ಇಷ್ಟು ಆಲೋಚನೆ ಏಕೆ?" ಒಂದು ಸಣ್ಣ ಕಥೆ ಕೇಳಿ; ಹೀಗೆಯೇ ಹಿಂದೊಮ್ಮೆ ಒಂದು ಕಲ್ಲಿಗೂ ಕೆಸರಿಗೂ ವಾದವೆದ್ದಿತ್ತು. 'ನಾನು ನೋಡು, ಎಷ್ಟು ಬಲವಾಗಿ, ಶುಭ್ರವಾಗಿ, ಸುಂದರವಾಗಿ ಇದ್ದೇನೆ! ನೀನಾದರೋ, ಛೀ!- ಮುಟ್ಟಿದರೆ ಮೈಗೆಲ್ಲಾ ಅಂಟಿಕೊಳ್ಳುವ ಕೊಳಕು ಅಂಟುಗಾರ. ನಿನ್ನನ್ನು ಮುಟ್ಟಲಿಕ್ಕೇ ಎಲ್ಲರೂ ಅಸಹ್ಯಪಡುತ್ತಾರೆ. ತಿಳಿಯದೆ ನಿನ್ನನ್ನು ಮೆಟ್ಟಿಬಿಟ್ಟರೆ, ಕೂಡಲೇ ಕಾಲು ತೊಳೆಯಬೇಕು' ಎಂದು ಕಲ್ಲು ಗರ್ವದಿಂದ ಹೇಳನ ಮಾಡಿತು.

ಇದನ್ನುಕೇಳಿ ಮೆದುವಾದ ಕೆಸರಿಗೂ ಕೋಪಬಂತು—'ಎಲೆ ಪಾಷಾಣವೆ! ನೋಡಲಿಕ್ಕೆ ನಾನು ಅಸಹ್ಯವಾಗಿಯೇ ಇದ್ದೇನು. ಆದರೆ ಪ್ರಾಣಿಗಳ ಪ್ರಾಣಗಳನ್ನು ಕಾಪಾಡುವ ಪೈರು ಪಚ್ಚೆಗಳಿಗೆ ಜೀವ ಕೊಡುವುದು ಯಾರುಗೊತ್ತೊ? ನಾನೇ. ನಾನಿಲ್ಲದಿದ್ದರೆ ಪೈರುಗಳು ಒಣಗಿಹೋದಾವು' ಎಂದಿತು ಧೀರತನದಿಂದ.

ಜಿ. ಶಿವಣ್ಣ, ಗದಗ

ರೈತನು ಹೇಳಿದ ಈ ಕಥೆಗೆ ವೇದಾಂತಿ– "ನಿಜವೇ ರೈತಾ. ಕೆಸರು ಹೇಳಿದ್ದನ್ನು ಅಲ್ಲವೆನ್ನಲಾಗುವುದಿಲ್ಲ. ಆದರೂ ಎರಡನೇ ಪಕ್ಷವನ್ನೂ ಯೋಚಿಸಬೇಕು. ಕೆಸರಿನಿಂದ ಪೈರು ಪಚ್ಚೆಗಳು ಬೆಳೆದರೆ, ದೊಡ್ಡ ದೊಡ್ಡ ಭವನಗಳನ್ನೂ ದೇವಾಲಯಗಳನ್ನೂ ಗೋಪುರಗಳನ್ನೂ ನಿರ್ಮಿಸಲು ಕಲ್ಲುಗಳು ಬೇಕಲ್ಲವೆ? ಆದ್ದರಿಂದ ಅದರದರ ಉಪಯೋಗ ಅದಕದಕೆ ಹೆಚ್ಚು. ಒಂದು ಹೆಚ್ಚು ಒಂದು ಕಡಮೆ ಎಂದಿಲ್ಲ. ಎರಡೂ ಲೋಕಕ್ಕೆ ಉಪಕಾರವೇ" ಎಂದನು.

"ಹಾಗೆ ದಾರಿಗೆ ಬನ್ನಿಸ್ವಾಮಿ. ಪ್ರತಿಯೊಬ್ಬನ ಉಪಯೋಗವೂ, ಪ್ರತಿವಸ್ತುವಿನ ಉಪಯೋಗವೂ ಪ್ರಪಂಚಕ್ಕೆ ಉಂಟೆಂದು ಈಗ ಒಪ್ಪುತ್ತೀರಷ್ಟೆ? ಇನ್ನೂ ಒಂದು ಸಣ್ಣ ಕಥೆ ಕೇಳಬೇಕು. ಆಮೇಲೆ ನಿಮ್ಮ ಖಂಡಿತ ಅಭಿಪ್ರಾಯ ತಿಳಿಸುವಿರಂತೆ" ಎಂದು ರೈತನು ಹೀಗೆಂದು ಹೇಳತೊಡಗಿದನು:

"ಒಂದು ಅಡವಿಯಲ್ಲಿ ಒಂದು ಆಲದ ಮರವೂ ಒಂದು ತೇಕಿನಮರವೂ ಅಕ್ಕಪಕ್ಕದಲ್ಲಿದ್ದುವು. ಒಮ್ಮೆ ಆಲದಮರವು ಹೆಮ್ಮೆಯಿಂದ—'ಆಹಾ! ನಾನು ಲಕ್ಷಾಂತರ ಜೀವಿಗಳಿಗೆ ನೆರಳುಕೊಡುತ್ತೇನೆ. ಅಸಂಖ್ಯ ಪಕ್ಷಿಗಳಿಗೆ ಆಶ್ರಯಕೊಡುತ್ತೇನೆ ನಿನ್ನಿಂದೇನಾದೀತು?' ಎಂದು ಮೂದಲಿಸಿತು.

ಅದಕ್ಕೆ ತೇಕಿನ ಮರ 'ಗರ್ವಿಷ್ಟ ಆಲವೆ! ನಿನ್ನ ಅಹಂಕಾರವನ್ನು ಕಟ್ಟಿಡು. ನೀನೆಷ್ಟರವನು? ನಿನ್ನ ನೆರಳೆಷ್ಟರದು? ನನ್ನ ಒಡಲಿನಿಂದ ಮಾನವರ ತಲೆತಲಾಂತರಕ್ಕೆ ಶಾಶ್ವತವಾದ ಮನೆಗಳಾಗುತ್ತವೆ ಗೊತ್ತೆ? ನಿನಗಿಂತ ನಾನೇನೂ ಕಡಮೆಯಿಲ್ಲ' ಎಂದು ಹೊಡೆದು ಹೇಳಿತು.

ರೈತನು ಹೇಳಿದ ಈ ಕಥೆಯನ್ನು ಕೇಳಿ ವೇದಾಂತಿ ಮೆಚ್ಚಿ ಅವನ ಕೈಯನ್ನು ಹಿಡಿದು– "ಹಾಗಾದರೆ ಅಪ್ಪಾ, ನೀನು ಶರೀರಕ್ಕೆ ನೆರಳನ್ನು ಕೊಡುವ ಆಲದಮರ, ನಾನು ಮನಸ್ಸಿಗೆ ಶಾಂತಿ ಕೊಡುವ ತೇಕಿನಮರ. ಪೈರುಗಳಿಗೆ ಜೀವವನ್ನು ಕೊಡುವ ಕೆಸರು ನೀನು, ರಕ್ಷಣೆ ಕೊಡುವ ಶಿಲೆಕಲ್ಲು ನಾನು! ತಿಳಿಯಿತು. ಒಬ್ಬರು ಮೇಲು ಒಬ್ಬರು ಕೀಳು ಎಂಬುದೇ ಇಲ್ಲ. ಲೋಕಕ್ಕೆ ನಾವಿಬ್ಬರೂ ಬೇಕೇಬೇಕು" ಎಂದು ನಿರ್ಮಲಮನಸ್ಸಿನಿಂದ ಹೇಳಿದನು.



1



2



## ಇಂದಿನ ಮಕ್ಕಳು



## ಮುಂದಿನ ಜನಾಂಗ



3



4

1. ಚಿ. ಆರ್. ಪಿ. ಮಾಲಿನಿ, ದಾವಣಗೆರೆ
2. ಚಿ. ಮೋಹನಸ್ವಾಮಿ, ಧಾರವಾಡ
3. ಚಿ. ಊರ್ಮಿಳ, ಮಂಗಳೂರು
4. ಚಿ. ದೇವಕಮ್ಮ, ಬೆಟಗೇರಿ

## ಮುಖಪುಟದ ಚಿತ್ರ

ಭೀಮನು ಕ್ರಮವಾಗಿ ಬೆಳೆಯುತ್ತಿದ್ದ. ಅವನಿಗೆ ಹನ್ನೊಂದನೆಯ ವಯಸ್ಸು ಪ್ರಾರಂಭವಾದಾಗ, ಅವನ ತಂದೆ ಪಾಂಡು ರಾಜನು ತೀರಿಹೋದನು. ಆದುದರಿಂದ ತಾಯಿ ಕುಂತೀದೇವಿಯೊಂದಿಗೆ ಪಾಂಡವರೈವರೂ 'ಶತಶೃಂಗ' ಪರ್ವತವನ್ನು ಬಿಟ್ಟು ಹಸ್ತಿನಾಪುರಕ್ಕೆ ಬಂದು ಸೇರಿದರು.

ಅಲ್ಲಿ ಪಾಂಡವರೂ ಕೌರವರೂ ಒಟ್ಟಿಗೇ ಆಡಿಕೊಂಡಿದ್ದರು. ಹಿರಿಯವನಾದ ಧೃತರಾಷ್ಟ್ರನು ಅವರೆಲ್ಲರನ್ನೂ ಪೋಷಣೆಮಾಡುತ್ತಿದ್ದನು. ಕೌರವರಿಗೂ ಪಾಂಡವರಿಗೂ ಒಂದಾಗಿಯೇ ಆಟ-ಪಾಟಗಳು ನಡೆದುವು.



ಎಲ್ಲರಿಗಿಂತಲೂ ಬಲದಲ್ಲಿ ಭೀಮನೇ ಹೆಚ್ಚು.

ಹತ್ತುಮಂದಿ ಮರವನ್ನೇರಿ ಕೋತಿಯಾಟ ಆಡುವಾಗ ಭೀಮನು ಆ ಮರವನ್ನೆ ಕಿತ್ತು ಕೆಡವಿಬಿಡುತ್ತಿದ್ದ. ಮರದಮೇಲಿದ್ದವರೆಲ್ಲ ಕೆಳಗೆಬಿದ್ದು ಬಿಡುತ್ತಿದ್ದರು. ಇಂತಹ ಎಷ್ಟೋ ಆಟಗಳಿಂದಲೇ ಭೀಮನ ಶಕ್ತಿ ಬಹಿರಂಗವಾಗುತ್ತಿತ್ತು. ಹಾಗೆ ಆಡುತ್ತ ಕೆಲವರಿಗೆ ಅವನು ಹಗೆಗಾರನಾಗಬೇಕಾಯಿತು.

ಆದರಲ್ಲಿಯೂ ದುರಹಂಕಾರಿಯೂ ಹಟಗಾರನೂ ಆದ ದುರ್ಯೋಧನನಿಗೆ ಭೀಮನನ್ನು ಕಂಡು ಸಹಿಸಲಾಗಲಿಲ್ಲ. ಭೀಮನನ್ನು ತೊಲಗಿಸಲಿಕ್ಕಾಗಿ ಸಮಯ ಹೊಂಚುತ್ತಲೇ ಇದ್ದನು. ಒಂದುದಿನ ಗಂಗಾತೀರದ 'ಪ್ರಮಾಣಕೋಟಿ' ಎಂಬ ಸ್ಥಳದಲ್ಲಿ ಕುರು-ಪಾಂಡವರು ಆಟವಾಡಲು ಗೊತ್ತುಮಾಡಿಕೊಂಡರು. ಹಾಗೆಯೇ ಅಲ್ಲಿ ಆಡಿ ಬಳಿಕ ಭಕ್ಷ್ಯಭೋಜ್ಯಗಳನ್ನು ತಿಂದು ಎಲ್ಲರೂ ಮಲಗಿದರು. ಭೀಮನು ಮಾದಕ ಪಾನೀಯವನ್ನು ಕುಡಿದಿದ್ದುದರಿಂದ ಗಾಢ ನಿದ್ರೆಯಲ್ಲಿ ಮುಳುಗಿದನು. ಕೂಡಲೇ ದುರ್ಯೋಧನನ ಪಕ್ಷದವರು ಭೀಮನನ್ನು ಬಲವಾದ ಹಗ್ಗದಿಂದ ಕಟ್ಟಿ ಎತ್ತಿ ಗಂಗಾನದಿಯೊಳಗೆ ಹಾಕಿಬಿಟ್ಟರು. ಆದರೆ ಭೀಮನು ಒಂದೇದಮ್ಮಿಗೆ ತನ್ನ ಕಟ್ಟುಗಳನ್ನು ಬಿಚ್ಚಿಕೊಂಡು, ಈಜಿ ದಡವನ್ನು ಸೇರಿ ಯಥಾಸ್ಥಾನದಲ್ಲಿ ಬಂದು ನಿದ್ರಿಸಿದನು. ಅವನಿಗೇನೂ ಆಗಿಲ್ಲ.

ಇದನ್ನು ನೋಡಿ ದುರ್ಯೋಧನನು ಇನ್ನೊಂದು ತಂತ್ರಮಾಡಿದ. ಭೀಮನು ನಿದ್ರಿಸಿದಾಗ ಕೌರವರು ಕಷ್ಣ ಸರ್ಪಗಳನ್ನು ತಂದು ಅವನಮೇಲೆ ಬಿಟ್ಟರು. ಆ ಕ್ರೂರ ಸರ್ಪಗಳು ಎಷ್ಟೇ ಕಚ್ಚಿದರೂ ಭೀಮನಿಗೇನೂ ಆಗಲಿಲ್ಲ. ಗಾಯವೇ ಆಗದಮೇಲೆ ವಿಷ ವಿಳಿಯುವುದೆಲ್ಲಿಂದ? ಎಚ್ಚರಿಕೆಯಾದ ಮೇಲೆ ಭೀಮನು ಧೂಳು ಝಾಡಿಸಿದಂತೆ, ಹಾವುಗಳನ್ನು ದೂರ ಓಡಿಸಿ ತನ್ನಪಾಡಿಗೆ ತಾನು ಹೊರಟನು.

ಹೀಗಿರಲು ಒಂದುದಿನ ಬಾದಷಹನ ಸನ್ನಿಧಿಗೆ ಯಾರೋ ಒಂದು ವಿಚಿತ್ರವಾದ ಕಟ್ಟನ್ನು ತಂದು ಸಮರ್ಪಣೆ ಮಾಡಿದರು. ಬಹಳ ಕುತೂಹಲದಿಂದ ಆ ಕಟ್ಟನ್ನು ಒಡೆದು ನೋಡಿದಾಗ, ಅದರೊಳಗೆ ಒಂದು ಅದ್ಭುತವಾದ ಯಾಂತ್ರಿಕ ಬುಲ್‌ಬುಲ್‌ಪಕ್ಷಿ ಇತ್ತು. ಅದರ ಮೈ ತುಂಬಾ ನವರತ್ನ ಖಚಿತವಾದ ಆಭರಣಗಳಿದ್ದುವು. ಕೊರಳಲ್ಲಿ ಒಂದು ಚೀಟಿ. ಅದರಲ್ಲಿ "ಪರ್ಷಿಯಾ ಚಕ್ರವರ್ತಿಯ ಬುಲ್‌ಬುಲ್‌ಗೆ, ಮತ್ತೆಲ್ಲಾ ದೇಶದ ಬುಲ್‌ಬುಲ್‌ಗಳೂ ಕಡಮೆಯೇ" ಎಂದಿತ್ತು.

ಆ ಯಾಂತ್ರಿಕ ಬುಲ್‌ಬುಲ್‌ನ ಕೀಲನ್ನು ತಿರುಗಿಸುತ್ತಲೇ, ಅದು ನಿಜವಾದ ಬುಲ್‌ಬುಲ್‌ಪಕ್ಷಿಯಂತೆಯೇ ಹಾಡಿತು. ಆಗ ಬಾದಷಹನು ಎರಡುಪಕ್ಷಿಗಳೂ ಒಂದೇಬಾರಿ ಹಾಡುವಂತೆ ಆಜ್ಞೆ ಮಾಡಿದನು. ಹಾಗೆ ಹಾಡಿಸಲು, ಎರಡರ ಸ್ವರವೂ ಸರಿಕೂಡಿ ಬರಲಿಲ್ಲ. ಬೇರೆಬೇರೆ ಹಾಡಿದಾಗ ಮಾತ್ರ ಅದಕ್ಕದೇ ಮನೋಹರವಾಗಿತ್ತು.



ಒಮ್ಮೆ ಒಂದು ಹಾಡನ್ನು ಯಾಂತ್ರಿಕ ಪಕ್ಷಿ ಮೂವತ್ತಮೂರುಬಾರಿ ಹಾಡಿದ ಮೇಲೆ ಅದನ್ನು ನಿಲ್ಲಿಸಿ 'ಈಗ ನಿಜವಾದ ಬುಲ್‌ಬುಲ್‌ಪಕ್ಷಿ ಹಾಡಲಿ' ಎಂದು ಬಾದಷಹನು ತನ್ನ ಅಭಿಲಾಷೆಯನ್ನು ವ್ಯಕ್ತಪಡಿಸಿದನು. ಎಲ್ಲರೂ ಬುಲ್‌ಬುಲ್ಲನ್ನು ಹುಡುಕಿದರು. ಆದರೆ ಆ ಪಕ್ಷಿ ಎಲ್ಲಿದೆ?

## ಚಂದಮಾಮ ಚಿತ್ರ

ಅದನ್ನು ಕಾಣದೆ ಎಲ್ಲರೂ ಆಶ್ಚರ್ಯಪಟ್ಟರು. ಹಿರಿಯನೊಬ್ಬನು 'ಅದು ಕೃತಜ್ಞತೆಯಿಲ್ಲದಪಕ್ಷಿ' ಎಂದನು. "ಹೋದರೆ ಹೋಗಲಿ. ಅದನ್ನು ಮಿಂಚಿದ ಇನ್ನೊಂದು ಪಕ್ಷಿ ಬಂದಿದೆಯಲ್ಲವೆ?" ಎಂದರು ಎಲ್ಲರೂ. ಆಸ್ಥಾನ ಗಾಯಕನು ಯಾಂತ್ರಿಕಪಕ್ಷಿಯನ್ನು ಮೆಚ್ಚುತ್ತಾ—'ನಿಜವಾದ ಬುಲ್‌ಬುಲ್ ಅದರ ಇಷ್ಟದಂತೆ ಅದು ಹಾಡುತ್ತದೆ. ಇದು ಹಾಗಲ್ಲ. ನಮ್ಮ ಇಷ್ಟಪ್ರಕಾರ ಕೀಲು ತಿರುಗಿಸಿದರೆಹಾಡುತ್ತದೆ' ಎಂದನು. ರಾಜಭವನದೊಳಗೆ ಬಾದಷಹನು ಒಂದು ಸಭೆಯನ್ನು ಏರ್ಪಡಿಸಿ, ಯಾಂತ್ರಿಕಪಕ್ಷಿಯಗಾನವನ್ನು ಕೇಳುತ್ತಿರುವಾಗ ಏನೋ ಸಂದೇಹತೋರಿತು. 'ಇದರ ಗಾನ ನಿಜವಾದ ಬುಲ್‌ಬುಲ್‌ಪಕ್ಷಿಯಂತಿದ್ದರೂ ಏನೋ ಒಂದು ಲೋಪವಿದೆ' ಎಂದು ಅಭಿಪ್ರಾಯಪಟ್ಟನು. ಅದರೂ ನಿಜಪಕ್ಷಿ ಹೇಳದೇ ಹೋದುದಕ್ಕಾಗಿ ಅದರ ಮೇಲೆ ಕೋಪವಿದ್ದೇ ಇತ್ತು. ಹೀಗೆ ಬಾದಷಹನು ಈ ಯಾಂತ್ರಿಕಪಕ್ಷಿಯನ್ನು ಅಂತಃಪುರದಲ್ಲಿ ತನ್ನ ಬಳಿಯೇ ಇರುವಂತೆ ಏರ್ಪಡಿಸಿಕೊಂಡು, ಯಾವಾಗಲೂ ಅದರ ಗಾನವನ್ನು ಕೇಳುತ್ತಾ ಆನಂದಿಸುತ್ತಿದ್ದನು.

# ಇಂದ್ರ

## ಬಣ್ಣದ ಪೆನ್ಸಿಲ್ ತಮಾಷೆ

ಒಂದು ಬಣ್ಣದ ಪೆನ್ಸಿಲುಗಳ ಪೆಟ್ಟಿಗೆ. ಅದರಲ್ಲಿ ಕೆಂಪು, ಬಿಳುವು, ಹಸುರು, ನೀಲಿ ಮೊದಲಾದ ಪೆನ್ಸಿಲುಗಳು ಇರುತ್ತವೆ. ಪ್ರತಿ ಪೆನ್ಸಿಲಿಗೂ ಹಿತ್ತಾಳಿಯ ಅಥವಾ ಸೆಲ್ಯುಲ್ಯಾಡಿನ ಕ್ಯಾಪ್ ಇರುತ್ತವೆ. ಇಂತಹ ಕ್ಯಾಪ್ ಸಹಿತವಾದ ಪೆನ್ಸಿಲುಗಳು ಪೇಟೆಯುಲ್ಲಿ ಸಿಕ್ಕುತ್ತವೆ. ಐಂದ್ರಜಾಲಿಕನು ಆ ಪೆನ್ಸಿಲುಗಳನ್ನು ಪ್ರೇಕ್ಷಕರಿಗೆ ಚೆನ್ನಾಗಿ ತೋರಿಸುವನು.

ಪ್ರೆಕ್ಷಕರು ಯಾವ ಪೆನ್ಸಿಲ್ ಹಸುರು, ಯಾವ ಪೆನ್ಸಿಲ್ ನೀಲಿ ಎಂದು ಕಾಗದದಮೇಲೆ ಗೆರೆ ಎಳೆದು ನೋಡಿ ಪರೀಕ್ಷಿಸುತ್ತಾರೆ. ಆಮೇಲೆ ಪ್ರೇಕ್ಷಕರಿಂದಲೇ ಒಂದು ಟೋಪಿಯನ್ನು ತೆಗೆದುಕೊಂಡು, ಪೆನ್ಸಿಲುಗಳನ್ನು ಅದರಲ್ಲಿ ಹಾಕಿ ಕಲೆಸಿಬಿಡಬೇಕು. ತರುವಾಯ ಐಂದ್ರಜಾಲಿಕನು ನೋಡದೆಯೇ, ಅದರಿಂದ ಒಂದು ಪೆನ್ಸಿಲನ್ನು ಅವನ ಕೈಗೆ ಕೊಟ್ಟರೆ, ಅದು ಯಾವ ಬಣ್ಣದ ಪೆನ್ಸಿಲೆಂದು ಅವನು ಸುಲಭವಾಗಿ ಹೇಳಿಬಿಡುವನು.




ನೋಡದೆಯೇ ಹೇಗೆ ಹೇಳಿದನೆಂದು ಎಲ್ಲರಿಗೂ ಆಶ್ಚರ್ಯವಾಗುತ್ತದೆ. ನೋಡದಿದ್ದರೂ ಕೈಗಳನ್ನು ಹಿಂದಕ್ಕಿಟ್ಟುಕೊಂಡು ಪೆನ್ಸಿಲಿಂದ ನಖಗಳ ಮೇಲೆ ಗೀರಿ ಅದನ್ನು ನೋಡಿ ಅವನು ಹೇಳಿರಬೇಕೆಂದು ಕೆಲವರು ಅಂದುಕೊಂಡಾರು. ಆದರೆ ನಿಜವಾದ ಗುಟ್ಟು ಹಾಗಲ್ಲ. ಹೇಗೆ ಗೊತ್ತೆ ?

ಈ ತಮಾಷೆಯುಲ್ಲಿ ಪೆನ್ಸಿಲಿಗಿರುವ ಕ್ಯಾಪುಗಳೇ ಬಹಳ ಸಹಾಯಮಾಡುತ್ತವೆ. ಈ ಪಕ್ಕದಲ್ಲಿರುವ ಚಿತ್ರವನ್ನು ನೋಡಿದರೆ ಆವಿಷಯ ಸ್ಪಷ್ಟವಾಗಿ ತಿಳಿಯುತ್ತದೆ.

ಇಲ್ಲಿ ಕಾಣುವಂತಹ ಪೆನ್ಸಿಲುಗಳು ಅನೇಕವಾಗಿ ಎಲ್ಲಾ

# ಜಾಲ

ಪೇಟೆಗಳಲ್ಲಿಯೂ ಸಿಕ್ಕುತ್ತವೆ. ಅವುಗಳಲ್ಲಿ 'ಕ' ಹಿತ್ತಾಳಿ ಕ್ಯಾಪ್ ಇರುವ ಪೆನ್ಸಿಲು, 'ಖ' ಸೆಲ್ಯುಲ್ಯಾಡ್ ಕ್ಯಾಪಿನದು. ಐಂದ್ರಜಾಲಿಕನು ಈ ಕ್ಯಾಪ್‌ಗಳಿರುವ ಪೆನ್ಸಿಲುಗಳನ್ನು ಕೊಂಡುಕೊಂಡು, ಕ್ಯಾಪ್ ತೆಗೆದು 1, 2, 3, 4, 5, 6 ಈ ನಂಬರುಗಳ ಪ್ರಕಾರ ಸೂಚಿಸಿದಂತೆ ಪೆನ್ಸಿಲಿನ ಹಿಂಬದಿಯಲ್ಲಿ ಕೊಂಚ ಕೆತ್ತಿ, ಮತ್ತೆ ಕ್ಯಾಪ್ ಹಾಕಿ, ಹೀಗೆ ಸಿದ್ಧಗೊಳಿಸಿದ ಪೆನ್ಸಿಲುಗಳನ್ನೆ ಇಟ್ಟುಕೊಂಡಿರಬೇಕು. ಹಿಂದಿನ ಬದಿಯಲ್ಲಿ ಅರ್ಧ ಚಂದ್ರದಂತೆ ಕೆತ್ತಿದ್ದು ಕೆಂಪುಪೆನ್ಸಿಲ್, ಮಧ್ಯದಲ್ಲಿ ಬಿಂದಿಯಂತೆ ಕೆತ್ತಿದ್ದು ನಂಬ್ರ 2 ನೇ ಪೆನ್ಸಿಲ್ ನೀಲ, '+' ಈ ಗುರುತಿನಂತೆ ಕೆತ್ತಿದ್ದು ಹಸುರು. ಹೀಗೆ ಎಲ್ಲಾ ಪೆನ್ಸಿಲಿಗೂ ಒಂದೊಂದು ಗುರುತಿರಬೇಕು.




ಐಂದ್ರಜಾಲಿಕನ ಕೈಗೆ ಪೆನ್ಸಿಲ್ ಕೊಡುತ್ತಲೇ ಕೈಯನ್ನು ಹಿಂದೆ ಕಟ್ಟಿಕೊಂಡಿದ್ದವನು ಹಾಗೆಯೇ ಬೇರೆಯವರಿಗೆ ತಿಳಿಯದಂತೆ, ಅದರ ಕ್ಯಾಪನ್ನು ಕಿತ್ತು, ಕೆತ್ತಿದ ಗುರುತನ್ನು ತಡವಿನೋಡಿಕೊಂಡು, ಅದು ಇಂತಿಂತಹ ಬಣ್ಣದ ಪೆನ್ಸಿಲ್ ಎಂದು ಹೇಳಿಬಿಡುತ್ತಾನೆ. ಕುರುಡರುಕೂಡ ಈ ಇಂದ್ರಜಾಲವನ್ನು ಮಾಡಬಲ್ಲರು.

---

ಈ ಗಾರುಡಿಯ ವಿಷಯ ಇನ್ನೂ ವಿವರವಾಗಿ ತಿಳಿಯಬೇಕಾದರೆ ಓದುಗರು 'ಚಂದಮಾಮ'ನ ಹೆಸರನ್ನು ಉದಾಹರಿಸಿ ನೇರಾಗಿ ಪ್ರೊಫೆಸರರಿಗೇ ಬರೆಯಬೇಕು. ಕಾಗದಗಳನ್ನು ಇಂಗ್ಲಿಷಿನಲ್ಲಿಯೇ ಬರೆಯ ಬೇಕೆಂಬುದು ಮುಖ್ಯ.

ವಿಳಾಸ: ಪ್ರೊಫೆಸರ್ ಪಿ. ಸಿ. ಸರ್ಕಾರ್, ಮೆಜಿಷಿಯನ್
12/3/A, ಜಮೀರ್‌ಲೇನ್, ಬಾಲಿಗಂಜ್, ಕಲಕತ್ತಾ - 19



## ನ ಗೆ ಹ ನಿ

ಮೇಷ್ಟ್ರು—ನೀನು ನಾಳೆ ಶಾಲೆಗೆ ಬರುವಾಗ ನಿನ್ನಪ್ಪನನ್ನು ಕರೆದುಕೊಂಡು ಬರಬೇಕು.

ಹುಡುಗ—ನನ್ನಪ್ಪ ಎಲ್ಲಿಗೆ ಹೋದ್ರೂ ಕನ್ಸಲ್ಟಿಂಗ್ ಫೀಸ್ ಹನ್ನೈದು ರೂಪಾಯಿ ಛಾರ್ಜುಮಾಡ್ತಾರೆ ಸಾರ್.

—ಎಂ. ಸಿ. ಪಪ್ತಿ, ಇಲಕಲ್ಲ.

* * *

ತಾಯಿ—ಬಿಸಿನೀರು ಕಾಯಿಸಲೇನೊ?

ಮಗ—ಬೇಡವ್ಮಾ, ತಣ್ಣೀರು ಕಾಯಿಸು.

—ಎಸ್. ವಿ. ಪಂಡಿತ, ಮೈಸೂರು.

* * *

ಗೋಪು—ರಾಮಾ ನನ್ನ ಕಿವಿ ಕಚ್ಚಿದಾ ಸಾರ್.

ರಾಮು—ಇಲ್ಲಾ ಸಾರ್. ಅವನೇ ಅವನ ಕಿವಿ ಕಚ್ಕೊಂಡದ್ದೂ!

ಪಿ.ಎನ್. ಗೋಪಾಲಕೃಷ್ಣರಾವ್, ಉಡುಪಿ.

---

ಕಳೆದ ತಿಂಗಳಿನ ಚಂದಮಾಮ ೧೨ ನೇ ಪುಟದ ಚಿತ್ರಗಳ ತಪ್ಪುಗಳು:

1. ಮುಚ್ಚಳದ ಗೆರೆ ಇರಬೇಕು.
2. ಗೊರಸು ಅಖಂಡವಾಗಿರಬೇಕು.
3. ಎಡಗಣ್ಣು ಬಲಗಡೆಗೂ ಬಲಗಣ್ಣು ಎಡಗಡೆಗೂ ಇರಬೇಕು.
4. ನೀರು ಬೀಳುವ ತೂತುಗಳಿರಬೇಕು.
5. ಹಲ್ಲುಗಳಿರಬೇಕು.
6. ನಿಬ್ಬಿನ ಮೊನೆ ಸೀಳಿರಬೇಕು.
7. ಕೊಡಲಿಯ ಕಾವು ಹೊರಕ್ಕೆ ಕಾಣಿಸಬೇಕು.
8. ಜೂನ್ ತಿಂಗಳಿಗೆ 31 ದಿನಗಳಿಲ್ಲ.
9. ೬ ಗುಂಡಿಗಳಿಗೆ ೬ ತೂತುಗಳು ಇರಬೇಕು.

## ಫೋಟೋ ಶೀರ್ಷಿಕೆಯ ಸ್ಪರ್ಧೆ

### ನವಂಬರ್ ಫೋಟೋಗಳ ಫಲಿತಾಂಶ

ನವಂಬರ್ ತಿಂಗಳ ಚಂದಮಾಮದಲ್ಲಿ ಪ್ರಕಟಿಸುವ ಫೋಟೋಗಳಿಗೆ ನಮಗೆಬಂದ ಶೀರ್ಷಿಕೆಗಳಲ್ಲಿ ಉತ್ತಮವಾಗಿರುವ ಈ ಕೆಳಗಿನ ಶೀರ್ಷಿಕೆಗಳಿಗೆ ಬಹುಮಾನವೆಂದು ನಿರ್ಣಯಿಸಲಾಗಿದೆ.

ಶೀ ರ್ಷಿ ಕೆ:

ಮೊದಲನೇ ಫೋಟೋ:

ಆಡುತ್ತಾ ವ್ಯಾಯಾಮ

ಎರಡನೇ ಫೋಟೋ:

ತಿನ್ನುತ್ತಾ ವ್ಯಾಯಾಮ

ಕ ಳಿ ಸಿ ದ ವ ರು:

ಶ್ರೀಮತಿ ಸಿ. ಜಗದಾಂಬಾ, ಮಲ್ಲೇಶ್ವರಂ, ಬೆಂಗಳೂರು

ಬಹುಮಾನಪಡೆದ ಈ ಶೀರ್ಷಿಕೆಗಳನ್ನು, ಕಳುಹಿಸಿದವರ ಹೆಸರಿನೊಂದಿಗೆ, ನವಂಬರ್ ಚಂದಮಾಮದಲ್ಲಿ ಪ್ರಕಟಿಸುತ್ತೇವೆ. ಬಹುಮಾನದ ಮೊಬಲಗು ರೂ. 10/-ನ್ನು ನವಂಬರ್ ಸಂಚಿಕೆ ಹೊರಟಕೂಡಲೇ ಕಳುಹಿಸಲ್ಪಡುತ್ತದೆ.

★

## ಡಿಸಂಬರ್ ತಿಂಗಳಲ್ಲಿ

ಪ್ರಕಟಿಸುವ ಫೋಟೋಗಳ ಮಾದರಿಯನ್ನು ವಿವರಗಳೊಂದಿಗೆ ಪಕ್ಕದ ಪುಟದಲ್ಲಿ ನೋಡಿ.

---

### ಮುಖ್ಯ ಸೂಚನೆ:

ನೀವು ಕಳುಹಿಸುವ ಶೀರ್ಷಿಕೆಗಳನ್ನು ಕಾರ್ಡಿನಲ್ಲಿಯೇ ಬರೆದುಕಳಿಸಬೇಕು. ಕೆಲವರು ಕಾಗದದಲ್ಲಿಬರೆದು ಕವರಿನಲ್ಲಿ ಕಳುಹಿಸುತ್ತಾರೆ. ಇಂತಹವುಗಳು ಪರಿಶೀಲಿಸಲ್ಪಡುವುದಿಲ್ಲ.

# ಫೋಟೋ ಶೀರ್ಷಿಕೆಯ ಸ್ಪರ್ಧೆ

ಡಿಸಂಬರ್ 1952 : : ಬಹುಮಾನ 10/- ರೂ.





ಡಿಸಂಬರ್ ಸಂಚಿಕೆಯಲ್ಲಿ ಬರುವ ಫೋಟೋಗಳು ಮೇಲೆ ಕಾಣಿಸಿರುತ್ತವೆ
ಇವುಗಳಿಗೆ ತಕ್ಕ ಒಂದು ಜತೆ ಶೀರ್ಷಿಕೆ ಬೇಕು.

1. ಶೀರ್ಷಿಕೆಗಳು ಫೋಟೋವಿಗೆ ಸರಿಹೊಂದುವಂತಿರಬೇಕು.
2. ಮುದ್ದಾದ ಒಂದು ಮಾತಾಗಲೀ, ಎರಡು ಮೂರು ಶಬ್ದಗಳ ಒಂದು ವಾಕ್ಯವಾಗಲೀ ಇರಬಹುದು.
3. ಮುಖ್ಯವಾಗಿ ಮೊದಲನೆಯ ಫೋಟೋವಿಗೂ ಎರಡನೆಯ ಫೋಟೋವಿಗೂ, ಒಂದಕ್ಕೊಂದು ಸಂಬಂಧಿಸಿಕೊಂಡಿರುವ ಮಾತುಗಳ ವಾಕ್ಯಗಳಾಗಿರಬೇಕು.
4. ಒಬ್ಬೊಬ್ಬರು ಒಂದೊಂದು ಜತೆ ವಾಕ್ಯಗಳಿಗಿಂತ ಹೆಚ್ಚಿಗೆ ಕಳಿಸಕೂಡದು.
5. ಒಂದು ಕಾರ್ಡಿನಲ್ಲಿ ನೀವು ಕಳುಹಿಸುವ ಶೀರ್ಷಿಕೆಗಳೂ, ನಿಮ್ಮ ಹೆಸರು, ವಿಳಾಸಗಳೂ ಸ್ಪಷ್ಟವಾಗಿರಬೇಕು.
6. ಅಕ್ಟೋಬರ್ 10-ನೇ ತಾರೀಕಿನೊಳಗೆವಾಕ್ಯಗಳು ನಮಗೆ ಬಂದು ಸೇರಬೇಕು. ಅನಂತರ ಬಂದುವುಗಳಿಗೆ ಗಮನಕೊಡಲಾಗುವುದಿಲ್ಲ.
7. ನಮಗೆ ಸೇರಿದ ವಾಕ್ಯಗಳಲ್ಲೆಲ್ಲಾ ಅತ್ಯುತ್ತಮವಾದ ಒಂದು ಜತೆಗೆ (ಅಂದರೆ ಎರಡು ಫೋಟೋ ಶೀರ್ಷಿಕೆಗಳಿಗೂ ಸೇರಿ) ರೂ. 10/- ಬಹುಮಾನವಾಗಿ ಕೊಡಲ್ಪಡುವುದು.
8. ಶೀರ್ಷಿಕೆ ವಾಕ್ಯಗಳನ್ನು ಕಳುಹಿಸಬೇಕಾದ ವಿಳಾಸ:

: ಫೋಟೋ ಶೀರ್ಷಿಕೆಯ ಸ್ಪರ್ಧೆ :

**ಚಂದಮಾಮ ಪಬ್ಲಿಕೇಷನ್ಸ್** ವಡಪಳನಿ ಪೋಸ್ಟ್ :: ಮದರಾಸು - 26.

# ವಿಜಯ

## ರವರ ಚಿತ್ರಗಳು

## ವಿನೋದಕ್ಕೆ
## ವಿಜ್ಞಾನಕ್ಕೆ
## ಸಾಟಿಯಿಲ್ಲದವು




**VIJAYA PRODUCTIONS LTD.**

**Lessees of Vauhini Studios**

**MADRAS - 26**

Printed by B. NAGI REDDI at the B. N. K. Press Ltd., Madras 26, and Published by him



ಬಹುಮಾನ
ಪಡೆದ ಶೀರ್ಷಿಕೆ

ಊರಿನಕಡೆಗೆ

ಕಳಿಸಿದವರು :
ಎಚ್. ಸಂಜೀವರಾವ್, ಸುರತಕಲ್ಲು




ಬಣ್ಣದ ಚಿತ್ರ ಕಥೆ—ಚಿತ್ರ - 4